

# ಹಣತೆ

ಜನವರಿ ಮಾರ್ಚ್
2009
ಸಂಪುಟ 12
ಸಂಚಿಕೆ 3
ಖಾಸಗಿ ಪ್ರಸಾರಕ್ಕಾಗಿ ಮಾತ್ರ

ಸಾಹಿತ್ಯ, ಸಂಸ್ಕೃತಿ, ಕಲೆ ಮತ್ತು ಕನ್ನಡ ಭಾಷೆಯ ಸಂವರ್ಧನೆಗೆ ಮೀಸಲಾದ
ಶಿವರಾಮ ಕಾರಂತ ವೇದಿಕೆ (ರಿ)ಯ ತ್ರೈಮಾಸಿಕ ಪತ್ರಿಕೆ

# ಶಿವರಾಮ ಕಾರಂತ ವೇದಿಕೆ (ರಿ)

ನಂ. 307, ಎರಡನೆಯ ವಿಭಾಗ, 17ನೇ ಅಡ್ಡರಸ್ತೆ, ರವೀಂದ್ರನಾಥ ಟಾಗೂರ್ ನಗರ,
ಬೆಂಗಳೂರು - 560 032. ದೂರವಾಣಿ : 080-23336822 / 9343766994
e-mail : pcchadaga@hotmail.com

## ಕಾರ್ಯಕಾರೀ ಸಮಿತಿ

1. ಅಧ್ಯಕ್ಷರು - ಶ್ರೀಮತಿ ರಾಧಾ ರಾಮಸ್ವಾಮಿ
2. ಉಪಾಧ್ಯಕ್ಷರು - ಶ್ರೀ ಬಿ. ವಿ. ಕೆದಿಲಾಯ
   - ಶ್ರೀ ಎಸ್. ಆರ್. ವಿಜಯಶಂಕರ
4. ಕಾರ್ಯದರ್ಶಿ - ಶ್ರೀ ಪಾ. ಚಂದ್ರಶೇಖರ ಚಡಗ
5. ಜೊತೆ ಕಾರ್ಯದರ್ಶಿಗಳು - ಶ್ರೀಮತಿ ಶಾಂತಕುಮಾರಿ
6. ಜೊತೆ ಕಾರ್ಯದರ್ಶಿಗಳು - ಶ್ರೀ ಡಿ. ಎಚ್. ವೀರಶೇಖರ ಸ್ವಾಮಿ
7. ಖಜಾಂಚಿ - ಡಾ॥ ಆರ್. ಆರ್. ಪಾಂಗಾಳ್

## ಸದಸ್ಯರು

1. ಶ್ರೀ ಸಾ. ರಾ. ವಾರಂಬಳ್ಳಿ
2. ಶ್ರೀ ಎ. ಆರ್. ರಾಮಯ್ಯ
3. ಶ್ರೀ ಬಿ. ಸದಾಶಿವರಾವ್
4. ಶ್ರೀ ಎ. ವಿ. ಕೇಶವ ಮೂರ್ತಿ
5. ಶ್ರೀಮತಿ ಚಿತ್ರಾ ವಿಠಲ್
6. ಶ್ರೀ ಸೀತಾರಾಮ್ ಪಿ.ಎಚ್.ಡಿ.
7. ಶ್ರೀ ರಮೇಶ್ ಗೋಟ
8. ಶ್ರೀ ಜಿ. ಕೆ. ಎಲ್. ರಾಜನ್

'ಹಣತೆ' ಯ ವ್ಯವಸ್ಥಾಪಕ ಸಂಪಾದಕರು : ಶ್ರೀ ಪಾ. ಚಂದ್ರಶೇಖರ ಚಡಗ
'ಹಣತೆ' ಯ ಗೌರವ ಸಂಪಾದಕರು : ಶ್ರೀ ಬಿ. ವಿ. ಕೆದಿಲಾಯ

# ಹಣತೆ

ಸಂಪುಟ 12 ಜನವರಿ - ಮಾರ್ಚ್ 2009 ಸಂಚಿಕೆ 3

## ಪರಿವಿಡಿ

# ಸಂಪಾದಕೀಯ

ಪ್ರಿಯ ಓದುಗ,

ಹಣತೆಯ ಕಳೆದ ಸಂಚಿಕೆ ಎರಡನೆಯ ವಿಶ್ವಕೂಟ ಸಮ್ಮೇಳನದ ಸಂದರ್ಭದಲ್ಲಿ (ದಿನಾಂಕ 27-12-08 ಮತ್ತು 28-12-08 ರಂದು) ಶಿವರಾಮ ಕಾರಂತ ವೇದಿಕೆಯು ಏರ್ಪಡಿಸಿದ್ದ ಕಾರಂತರ ಭಾವಚಿತ್ರ, ಹಸ್ತಾಕ್ಷರ ಮತ್ತು ಪುಸ್ತಕ ಪ್ರದರ್ಶನದ ನಡುವೆ ಬಿಡುಗಡೆಗೊಂಡಿತು.

ಈ ಜಗತ್ತಿನ ಒಳಗಿನ "ಕೂಟ ಮಹಾಜಗತ್ತಿ"ನ ಎರಡು ಲಕ್ಷ ಬ್ರಾಹ್ಮಣರಲ್ಲಿ ಸುಮಾರು ಆರು ಸಾವಿರ ಜನ ಈ ಪ್ರದರ್ಶನಕ್ಕೆ ಕರ್ನಾಟಕದ ಮೂಲೆ ಮೂಲೆಗಳಿಂದ ಬಂದಿದ್ದರಂತೆ. ಸೊಗಸಾದ ಊಟ, ಅಚ್ಚುಕಟ್ಟಾದ ಕಾರ್ಯಕ್ರಮ, ಎಲ್ಲವೂ ಚೆನ್ನಾಗಿದ್ದವು. ನಾವು ರೂ. 25 ಸಾವಿರಕ್ಕೂ ಹೆಚ್ಚಿಗೆ ಹಣ ಖರ್ಚು ಮಾಡಿ ಈ ಸಮ್ಮೇಳನದಲ್ಲಿ ಮುಖ್ಯವಾಗಿ ಶ್ರೀ ಯಜ್ಞನಾರಾಯಣ ಕಮ್ಮಾಜೆಯವರ ನೆರವಿನಿಂದ ಒಂದು ಕಾರಂತ ಪ್ರಪಂಚವನ್ನೇ ಅತ್ಯಂತ ಕಡಿಮೆ ಸಮಯದಲ್ಲಿ ಸೃಷ್ಟಿಸುವ ಸಾಹಸಕ್ಕೆ ಕೈ ಹಾಕಿದ್ದೆವು. ತರಳಬಾಳು ಗ್ರಂಥಾಲಯದಲ್ಲಿದ್ದ ಕಾರಂತರ ಪುಸ್ತಕಗಳನ್ನೂ ಮತ್ತು ಕಟ್ಟು ಹಾಕಿಸಿದ ಕಾರಂತರ ಭಾವಚಿತ್ರಗಳನ್ನೂ ಹಿಂದಿನ ದಿನ ಸಮಾರಂಭ ನಡೆಯುವ ಸ್ಥಳಕ್ಕೆ ಟೆಂಪೋದಲ್ಲಿ ಸಾಗಿಸಿದೆವು. ಕಾರಂತರ ಹಸ್ತಾಕ್ಷರ, ಭಾವಚಿತ್ರಗಳಿಗೆ ಕಟ್ಟು ಹಾಕಿ ಅವು ಎಂದಾದರೂ ಕಾರಂತರ ಸ್ಮೃತಿಶಾಲೆ (ಮ್ಯೂಸಿಯಂ) ಒಂದು ಬೆಂಗಳೂರಿನಲ್ಲಿ ತಲೆ ಎತ್ತಲು ನೆರವಾದೀತು ಎನ್ನುವ ಕನಸನ್ನು ಕಾಣುತ್ತಿದ್ದೇವೆ. 27-12-08 ರಂದು ನಮ್ಮ ಉಪಾಧ್ಯಕ್ಷರಾದ ಶ್ರೀ ಎಸ್. ಆರ್. ವಿಜಯಶಂಕರ್ ಹಾಗೂ ಶಿವರಾಮ ಕಾರಂತರ ಮಗ ಮತ್ತು ಜಗತ್ತಿನ ಶ್ರೇಷ್ಠ Wild Life Biologist ಆಗಿರುವ ಶ್ರೀ ಉಲ್ಲಾಸ ಕಾರಂತರು ದೀಪ ಬೆಳಗಿ ನಮ್ಮ ಮಳಿಗೆಯನ್ನು ಉದ್ಘಾಟಿಸಿದರು. ಈ ಸ್ಟಾಲು (ಮಳಿಗೆ) ಆ ಸಮಾರಂಭದ ಇತರ ಸ್ಟಾಲುಗಳಿಗಿಂತ ಬೇರೆಯೇ ಆಗಿತ್ತು. ಮರುದಿನ ಸಂಜೆ ಶ್ರೀಮತಿ ಮಾಲಿನಿ ಮಲ್ಯ ಅವರು ನಮ್ಮ ಮಳಿಗೆಗೆ ಬಂದು ವೇದಿಕೆಯ ಪ್ರಯತ್ನವನ್ನು ಮೆಚ್ಚಿದರು.

ಎರಡೂ ದಿನ ಪ್ರತಿಯೊಬ್ಬ ಭಾಷಣಕಾರರೂ ಶಿವರಾಮ ಕಾರಂತರನ್ನು ನೆನಪಿಸಿಕೊಂಡಿದ್ದು ಸತ್ಯ. ಆದರೆ ಕಾರಂತರ ಸಾಹಿತ್ಯದ ಕುರಿತಾಗಿ ಪ್ರತ್ಯೇಕ ಭಾಷಣವಿಲ್ಲದಿದ್ದುದು ಒಂದು ಕೊರತೆಯಾಗಿ ಕಾಣುತ್ತಿತ್ತು. ಕುಂದಾಪುರದಿಂದ ಸಮ್ಮೇಳನಕ್ಕೆಂದೇ ಬಂದ ಶ್ರೀ ಎ. ಎಸ್. ಎನ್. ಹೆಬ್ಬಾರರು ನಮ್ಮೊಂದಿಗೆ ಕೆಲವು ಹೊತ್ತು ಕಳೆದರು. ಅವರ ಅಭಿಪ್ರಾಯವನ್ನು ಈ ಸಂಚಿಕೆಯಲ್ಲಿ ಪ್ರಕಟಿಸಿದ್ದೇವೆ. ಅವರು ನಮ್ಮ ಶಿಕಾಗೋ ಭೇಟ್ಟಿಯನ್ನು ಸ್ಮರಿಸಿಕೊಂಡರು. ಅವರು ಶಿಕಾಗೋದ 'ಅಕ್ಕ' ಸಮ್ಮೇಳನದಲ್ಲಿ ಭಾಗವಹಿಸಿ ಕುಂದಾಪುರದ ಕನ್ನಡದಲ್ಲಿ ತಾವು ರಚಿಸಿದ ಕವನವನ್ನು ಓದಿ ಎಲ್ಲರ ಪ್ರಶಂಸೆಗೆ ಒಳಗಾಗಿದ್ದರು. ನಾನೂ ಸಹ ಅಲ್ಲಿ ಸುವರ್ಣ ಕರ್ನಾಟಕ ಗೀತೆ ಎಂಬ ಕವನವನ್ನು ಓದಿ ಓದುಗರನ್ನು ಗಂಭೀರ ಚಿಂತನೆಗೆ ಒಡ್ಡುವ ಪ್ರಯತ್ನ ಮಾಡಿದ್ದೆನು. ಕೂಟದ ಹದಿನಾಲ್ಕು ಗ್ರಾಮಕ್ಕೆ ಸೇರಿದ ಪಾಂಡೇಶ್ವರ ಗ್ರಾಮದಲ್ಲಿ ಹುಟ್ಟಿದ ನನಗೆ ಕಾರಂತರು ಮಾನಸ ಗುರು. ಅವರ ಕೃತಿ ಮತ್ತು ವ್ಯಕ್ತಿತ್ವದಿಂದಲೂ ಪ್ರೇರಿತನಾಗಿ ಕಳೆದ 16 ವರ್ಷಗಳಿಂದ ಬೆಂಗಳೂರಿನಲ್ಲಿ ಶಿವರಾಮ ಕಾರಂತ ವೇದಿಕೆಯನ್ನು ಕಟ್ಟಿ ಬೆಳೆಸಲು ವಿವೇಕ ಹೈಸ್ಕೂಲಿನಲ್ಲಿ ನನಗೆ ಮುಖ್ಯೋಪಾಧ್ಯಾಯರಾದ ಕೋ. ಲ. ಕಾರಂತ (ಶಿವರಾಮ ಕಾರಂತರ ಅಣ್ಣ) ಮತ್ತು ಆಗೊಮ್ಮೆ ಈಗೊಮ್ಮೆ ಶಾಲೆಗೆ ಬಂದು ಭಾಷಣ ಮಾಡುತ್ತಿದ್ದ ಶಿವರಾಮ ಕಾರಂತರೇ ಪ್ರೇರಕರು.

ಕೂಟ ಮಹಾಜಗತ್ತಿನಲ್ಲಿ ಶಿವರಾಮ ಕಾರಂತ ಮತ್ತು ಲಕ್ಷ್ಮೀನಾರಾಯಣ ಕಾರಂತರಂತಹ ವ್ಯಕ್ತಿಗಳು ಆಗಿ ಹೋಗಿರುವುದು ಪುಣ್ಯ ವಿಶೇಷ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಕಂಡು ಬಂದ ಸ್ವಾರ್ಥ ರಾಜಕಾರಣ, ಲಂಚಗುಳಿತನಗಳಿಂದ ಕಾರಂತರು ರೋಸಿಹೋಗಿದ್ದರು. ಕಾರಂತರು ತಮ್ಮ "ಗೊಂಡಾರಣ್ಯ". "ಕೇವಲ ಮನುಷ್ಯರು", "ನಾವು ಕಟ್ಟಿದ ಸ್ವರ್ಗ", "ಅದೇ -

ಊರು ಅದೇ ಮರ" "ಅಂಟಿದ ಅಪರಂಜಿ", "ಒಂಟಿ ದನಿ" ಮುಂತಾದ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಕಂಡು ಬಂದ ಆದರ್ಶ ಸ್ವಾತಂತ್ರ್ಯೋತ್ತರದ ಭಾರತದಲ್ಲಿ ಮರೆಯಾಗಿರುವುದನ್ನು ತಮ್ಮ ಕೃತಿಯ ವಸ್ತುವಾಗಿ ಆರಿಸಿಕೊಂಡಿದ್ದರು. ಕಾರಂತ ಮತ್ತು ಅಡಿಗ 20ನೇ ಶತಮಾನಕ್ಕೆ ಅವಿಭಾಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಹಾನ್ ಕೊಡುಗೆಗಳು.

ಶಿವರಾಮ ಕಾರಂತರಿಗೆ ಪುನರ್ಜನ್ಮದಲ್ಲಿ ನಂಬಿಕೆ ಇರಲಿಲ್ಲ. ಈ ಜನ್ಮದಲ್ಲೇ ಜೀವನ ಪ್ರವಾಹಕ್ಕೆ ನಮ್ಮದೇನಾದರೂ ಕಾಣಿಕೆ ಸಲ್ಲಿಸಬೇಕಾದದ್ದು ನಮ್ಮೆಲ್ಲರ ಕರ್ತವ್ಯವಾಗಿದೆ ಎಂದು ಅವರು ನಮಗೆ ಬಹು ದೊಡ್ಡ ಪಾಠ ಹೇಳಿಕೊಟ್ಟಿದ್ದಾರೆ. ಸಮಾಜದ ಋಣದ ಕಲ್ಪನೆ, ಸಕಲ ಜೀವಿಗಳಲ್ಲಿ ಪ್ರೀತಿ ಕಾರಂತರ ಸರಳ ಸುಂದರ ಜೀವನದೃಷ್ಟಿಯ ಅಂಗವಾಗಿದ್ದು ಎಲ್ಲಾ ಕಾಲಕ್ಕೂ ಜನರನ್ನು ಆಕರ್ಷಿಸಬಲ್ಲದು.

## ಎ. ಆರ್. ಕೃಷ್ಣಶಾಸ್ತ್ರಿಗಳ ಸಂಸ್ಮರಣೆ

ಕನ್ನಡ ಭಾಷೆಯ ಉಳಿವು ಹಾಗೂ ಅಭ್ಯುಯದಕ್ಕಾಗಿ ತಮ್ಮ ಜೀವನವನ್ನೇ ಮುಡಿಪಿಟ್ಟ ಡಾ. ಎ. ಆರ್. ಕೃಷ್ಣ ಶಾಸ್ತ್ರಿಗಳ ನೆನಪಿನ ದತ್ತಿ ನಿಧಿಯನ್ನು ಶ್ರೀ ಸಿ. ಆರ್. ಸತ್ಯರವರು ನಮ್ಮ ವೇದಿಕೆಯಲ್ಲಿ ಸ್ಥಾಪಿಸಿ ಪ್ರತಿ ವರ್ಷ ಫೆಬ್ರವರಿ ತಿಂಗಳಲ್ಲಿ ಆ ಮಹಾತ್ಮರನ್ನು ನಾವು ಸ್ಮರಿಸುವಂತೆ ಮಾಡಿದ್ದಾರೆ. ದಿನಾಂಕ 08-02-09 ರಂದು ಕೃಷ್ಣಶಾಸ್ತ್ರಿಗಳ ಸಂಸ್ಮರಣೆಯನ್ನು ನಾವು ಅರ್ಥಪೂರ್ಣವಾಗಿ ಆಚರಿಸಿದೆವು. ಡಾ॥ ಶ್ರೀರಾಮ ಭಟ್ಟರು ಕೃಷ್ಣಶಾಸ್ತ್ರಿಗಳು ಕನ್ನಡದ ಪರಿಚಾರಕನಾಗಿ ಮಾಡಿದ ಕೆಲಸವನ್ನೂ ಕನ್ನಡ ಸಾಹಿತ್ಯಕ್ಕೆ ಅವರ ಕೊಡುಗೆಯನ್ನೂ ಬಹಳ ಚೆನ್ನಾಗಿ ವಿವರಿಸಿದರು.

ಶ್ರೀ ಸಿ. ಆರ್. ಸತ್ಯರವರು ಡಾ. ಎ. ಆರ್. ಕೃಷ್ಣಶಾಸ್ತ್ರಿಗಳ ಕುರಿತು ಬರೆದ ಹೊತ್ತಗೆಯಲ್ಲಿದ್ದ ಕೃಷ್ಣಶಾಸ್ತ್ರಿಗಳ ಕಿರು ಪರಿಚಯದ ಪಟ್ಟಿಯನ್ನು ನಮಗೆ ಒದಗಿಸಿಕೊಟ್ಟಿದ್ದಾರೆ. ಈ ಸಂಚಿಕೆಗಾಗಿ ಕೃಷ್ಣ ಶಾಸ್ತ್ರಿಗಳ 'ವಚನಭಾರತ'ದ ಕುರಿತು ಶ್ರೀ ಬಿ. ವಿ. ಕೆದಿಲಾಯರು ಲೇಖನವನ್ನು ಬರೆದಿದ್ದಾರೆ. ಕನ್ನಡವನ್ನು ಕಟ್ಟುವ ಕಾಯಕದಲ್ಲಿ ತಮ್ಮನ್ನು ತೊಡಗಿಸಿ ಪ್ರಾತಃಸ್ಮರಣೀಯರಾದ ಎಲ್ಲರನ್ನೂ ನಾವು ಆಗಾಗ ಸ್ಮರಿಸುವಂತೆ ಇನ್ನೂ ಕೆಲವರಾದರೂ ಇಂತಹ ದತ್ತಿನಿಧಿಯನ್ನು ಸ್ಥಾಪಿಸಲಿ ಎಂದು ಆಶಿಸುತ್ತೇನೆ.

# ಚಿನ್ನದ ಗೋಪುರಕ್ಕೆ ರನ್ನದ ಕಳಶ

- ಬಿ.ವಿ.ಕೆದಿಲಾಯ

ಪಾತ್ರಃಸ್ಮರಣೀಯರಾದ ಎ. ಆರ್. ಕೃಷ್ಣಶಾಸ್ತ್ರಿಗಳ ''ವಚನ ಭಾರತ' ಕನ್ನಡ ಸಾಹಿತ್ಯದ ಅಜರಾಮರ ಮೇರು ಕೃತಿಗಳಲ್ಲೊಂದು. ''ಇದು ಭಾರತದ ಬಂಗಾರದ ಪುಸ್ತಕ. ಕನ್ನಡ ಬದುಕಿರುವವರೆಗೂ ಉಳಿಯುವ ಪುಸ್ತಕ'' ಎಂದು ರಾಷ್ಟ್ರಕವಿ ಗೋವಿಂದ ಪೈಯವರು ಇದರ ಬಗ್ಗೆ ಹೇಳಿರುವುದರಲ್ಲಿ ಉತ್ಪ್ರೇಕ್ಷೆಯಿಲ್ಲ. ಈ ಗ್ರಂಥದಲ್ಲಿ ಜಗತ್ತಿನ ಮಹಾ ಕಾವ್ಯಗಳಲ್ಲಿ ಅನನ್ಯವೆನಿಸಿರುವ ಮಹಾಭಾರತದ ಬೃಹತ್ ಕಥೆಯನ್ನು ಸಮಗ್ರವಾಗಿ, ಸಂಗ್ರಹವಾಗಿ, ಅಧಿಕೃತವಾಗಿ, ಸಂಕ್ಷಿಪ್ತವಾಗಿ ಹಾಗೂ ರಸವತ್ತಾಗಿ ಪುನಃ ಸೃಷ್ಟಿವುದರಲ್ಲಿ ಶಾಸ್ತ್ರಿಗಳ ಅರವತ್ತು ವರ್ಷಗಳ ಸಾರಸ್ವತ ತಪಸ್ಸು ಸಾರ್ಥಕವಾಗಿದೆ. ಕನ್ನಡದಲ್ಲಿ ಮಹಾಭಾರತದ ಕುರಿತ ಪುಸ್ತಕಗಳು ಬೇಕಾದಷ್ಟಿವೆ. ಅದರ ಒಂದೊಂದು ಭಾಗವನ್ನೋ, ಪಾತ್ರವನ್ನೋ, ಪ್ರಸಂಗವನ್ನೋ ಆಧರಿಸಿ ಬರೆಯಲಾದ ನೂರಾರು ಕೃತಿಗಳಿವೆ. ಆದರೆ ಶಾಸ್ತ್ರಿಗಳ ವಚನ ಭಾರತಕ್ಕೆ ಸರಿಸಾಟಿಯಾದ ಗ್ರಂಥ ಬೇರೆ ಇಲ್ಲ. ಈ ಮೇರು ಕೃತಿಗೆ ಅವರು ಬರೆದಿರುವ 54 ಪುಟಗಳ ಪೀಠಿಕೆಯಂತೂ ಚಿನ್ನದ ಗೋಪುರಕ್ಕೆ ರನ್ನದ ಕಳಶದಂತಿದೆ. ಈ ಪೀಠಿಕೆಯಲ್ಲಿ ಶಾಸ್ತ್ರಿಗಳು ಮಹಾಭಾರತಕ್ಕೆ ಸಂಬಂಧಿಸಿದ ಎಲ್ಲ ಪ್ರಮುಖ ವಿಷಯಗಳ ಸ್ವಾರಸ್ಯವನ್ನೇ ಭಟ್ಟಿಯಿಳಿಸಿದ್ದಾರೆ. ಸಾಹಿತ್ಯ ಪ್ರಿಯರೆಲ್ಲ ಓದಿ ಸವಿಯಲೇ ಬೇಕಾದ ಅಮೂಲ್ಯ ಬರಹ ಇದು.

**ಉದ್ದೇಶ:**

ಈ ಪೀಠಿಕೆಯ ಆರಂಭದಲ್ಲಿ ಶಾಸ್ತ್ರಿಗಳು ಹೇಳುತ್ತಾರೆ. ''ನನ್ನ ಉದ್ದೇಶ ಕಿತ್ತಳೆಹಣ್ಣಿನ ಸಿಪ್ಪೆ ಸುಲಿದು, ತೊಳೆಗಳನ್ನು ಬಿಡಿಸಿ, ನಾರು, ಬೀಜಗಳನ್ನು ತೆಗೆದು ಹಾಕಿ ಕುಸುಮವನ್ನು ಒಂದು ಅಡಕವಾದ ಬೆಳ್ಳಿಯ ತಟ್ಟೆಯಲ್ಲಿ ಜೋಡಿಸಿಡುವಂಥದು''. ಈ ಒಂದು ವಾಕ್ಯದಲ್ಲೇ ಅವರ ಬರಹದ ಸತ್ವ, ಸೊಗಸು ವ್ಯಕ್ತವಾಗುತ್ತವೆ. ಇಂಥ ಶ್ರೇಷ್ಠ ಸಾಹಿತ್ಯ ಗುಣಗಳು ಈ ಪೀಠಿಕೆಯಲ್ಲಿ ಸಾಂದ್ರವಾಗಿ, ತುಂಬಿ ತುಳುಕುತ್ತಿರುವುದರಿಂದ ಇದನ್ನೋದುವುದು ಓದುಗರ ಬುದ್ಧಿಭಾವಗಳಿಗೊಂದು ರಸದೌತಣವೇ ಸರಿ. ಶಾಸ್ತ್ರಿಯವರ ಅಗಾಧ ಪಾಂಡಿತ್ಯ, ಅನುಪಮ ವಿಮರ್ಶಾ ವಿವೇಕ, ಗಂಭೀರವಾದರೂ ಲವಲವಿಕೆಯುಳ್ಳ ನಿರೂಪಣಾ ಶೈಲಿ, ಆಪ್ತ. ಆತ್ಮೀಯ ಧಾಟಿ - ಇವು ಓದುಗರ, ಮನಸ್ಸಿನ ಮೇಲೆ ಗಾಢ ಪ್ರಭಾವವನ್ನುಂಟು ಮಾಡುತ್ತವೆ.

**ಹೂರಣ:**

'ಮಹಾಭಾರತವು ಬಹು ದೊಡ್ಡ ಗ್ರಂಥ. ಇಷ್ಟೊಂದು ಗಾತ್ರದ ಗ್ರಂಥ ವಿಶ್ವಸಾಹಿತ್ಯದಲ್ಲೇ 'ಇಲ್ಲ' ಎಂದು ಆರಂಭವಾಗುವ ಈ ಪೀಠಿಕೆ ಕನ್ನಡ, ಸಂಸ್ಕೃತ ಭಾಷೆಗಳಲ್ಲಿರುವ ಭಾರತಗಳು, ಅವುಗಳ ಮೂಲ , ಪ್ರಕ್ಷಿಪ್ತತೆ ಮತ್ತು ಅಧಿಕೃತ ಮೂಲ ಗ್ರಂಥದ ಬಗ್ಗೆ ನಡೆದಿರುವ ಸಂಶೋಧನೆಗಳ ಕುರಿತು ಹೇಳುತ್ತದೆ. ಬಳಿಕ ಅನುಕ್ರಮಣಿಕೆ, ಪರ್ವ ಸಂಗ್ರಹ ಪರ್ವ, ಪೌಷ್ಯ ಪರ್ವ, ಪೌಲೋಮ ಪರ್ವ, ಅಸ್ತೀಕ ಪರ್ವ, ಆದಿವಂಶಾವತರಣ ಪರ್ವ, ಯಯಾತಿ, ಶಕುಂತಲೋಪಾಖ್ಯಾನ, ವಂಶಾನುಕ್ರಮಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿ, ಶಂತನು ಮಹಾರಾಜನ ಅಳ್ವಿಕೆಯಿಂದ 'ವಚನ ಭಾರತ'ದ ಆರಂಭವನ್ನು ಸೂಚಿಸುತ್ತಾರೆ. ಅನಂತರ ಮಹಾಭಾರತದ ಹುಟ್ಟು, ಬೆಳವಣಿಗೆ, ಕಾಲ, ಕರ್ತೃಗಳ ಬಗ್ಗೆ ನಡೆದಿರುವ ಸಂಶೋಧನೆಗಳ

ಸಾರಾಂಶವಿದೆ. ಅನಂತರ. ಇತಿಹಾಸ, ಪುರಾಣ ಆಖ್ಯಾನಗಳು, ಧರ್ಮ ನೀತಿಗಳು, ಕಾವ್ಯ ಗುಣ, ದರ್ಶನಗಳು, ಭಗವದ್ಗೀತೆ, ದೇವತಾ ಪೂಜೆ, ಸನ್ಯಾಸ, ಯಜ್ಞ, ದಾನ, ತಪಸ್ಸುಗಳ ಪರಿಕಲ್ಪನೆ, ಅಹಿಂಸೆಯ ಅರ್ಥ ವ್ಯಾಪ್ತಿ, ಕಷ್ಟ ಸುಖಗಳ ಸಮಸ್ಯೆ, ಕರ್ಮ - ಇವುಗಳನ್ನು ಮಹಾಭಾರತದ ವಿವಿಧ ಪಾತ್ರಗಳ ಮತ್ತು ಸನ್ನಿವೇಶಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸುತ್ತಾರೆ. ಬಳಿಕ 'ಇಂದಿನ ಪ್ರಪಂಚ ಮತ್ತು ಅದಕ್ಕೆ ಮಹಾಭಾರತದ ಸಂದೇಶ' ಎಂಬ ಸೊಗಸಾದ ಅಧ್ಯಾಯ ಬರುತ್ತದೆ. ಕೊನೆಯದಾಗಿ ವಚನ ಭಾರತದಲ್ಲಿ ಸಾಹಿತ್ಯ ದೃಷ್ಟಿಯಸ್ವರೂಪ ಯಾವುದು ಎನ್ನುವುದರ ಬಗ್ಗೆ ಲೇಖಕರ ನಿಲುವಿನ ಸ್ಪಷ್ಟೀಕರಣ ಸ್ಪಟಿಕದ ಶಲಾಕೆಯಂತೆ ಮೂಡಿ ಬಂದಿದೆ. ಶಾಸ್ತ್ರಿಗಳು ಹೀಗೆ ಆರಂಭಿಸುತ್ತಾರೆ.

**ಕಾವ್ಯದೃಷ್ಟಿ:**

"ಈ ಗ್ರಂಥದ ರಚನೆಯಲ್ಲಿ ನನ್ನ ದೃಷ್ಟಿಯು ಮುಖ್ಯವಾಗಿ ಕಾವ್ಯ ದೃಷ್ಟಿ, ಸಾಹಿತಿಯ ದೃಷ್ಟಿ, ಕಥೆ ಚೆನ್ನಾಗಿರಬೇಕು, ರಸವತ್ತಾಗಿರಬೇಕು, ವರ್ಣನೆ, ಧರ್ಮ, ಅಲಂಕಾರ, ನೀತಿ ಎಲ್ಲ ಉಚಿತ ಪ್ರಮಾಣದಲ್ಲಿ, ಹದವಾಗಿ ಹೊಂದಿಕೊಂಡಿರಬೇಕು. ಮೂಲದಲ್ಲಿ ಸಾರವತ್ತಾದ್ದೆಲ್ಲ ವಾಕ್ಯವಾಗಿಳಿಯಬೇಕು. ಆದರೂ ಹಿಡಿತದಲ್ಲಿಡಬೇಕು. ಭಾಷೆ ಬಿಗಿಯಾಗಿಯೂ ತಿಳಿಯಾಗಿಯೂ ಇರಬೇಕು - ಇದು ನನ್ನ ಗುರಿ"ಈ ಗುರಿಯನ್ನು ಸಾಧಿಸುವಲ್ಲಿ ಶಾಸ್ತ್ರಿಯವರು ನಿಸ್ಸಂದೇಹವಾಗಿ ಸಫಲರಾಗಿದ್ದಾರೆ. ಹೀಗಾಗಿ 'ವಚನ ಭಾರತ' ಒಂದು ಅತ್ಯುತ್ತಮ ಆಧುನಿಕ ಕಾದಂಬರಿಯಂತೆ ಸಲೀಸಾಗಿ ಓದಿಸಿಕೊಂಡು ಹೋಗುತ್ತದೆ. ಆದರೆ ಅದರ ಆಳದಲ್ಲಿರುವ ಸಂಕೀರ್ಣತೆಯನ್ನಾಗಲೀ, ಗಾಂಭೀರ್ಯವನ್ನಾಗಲೀ, ದಾರ್ಶನಿಕತೆಯನ್ನಾಗಲೀ ಒಂದಿಷ್ಟೂ ಕಳೆದುಕೊಳ್ಳುವುದಿಲ್ಲ. ವಿದ್ವತ್ಪೂರ್ಣವೂ, ಸ್ವಾರಸ್ಯಕರವೂ ಆದ ಪೀಠಿಕೆಯನ್ನು ಓದಿದ ನಂತರ 'ವಚನ ಭಾರತ' ವನ್ನೋದಲೇಬೇಕೆಂಬ ಹುಮ್ಮಸ್ಸು ಓದುಗನಲ್ಲಿ ಅದಮ್ಯವಾಗುತ್ತದೆ. ಆದರೆ ಒಂದು ಪಕ್ಷ ಅದು ಅಸಾಧ್ಯವಾದರೆ ಈ ಪೀಠಿಕೆಯನ್ನಾದರೂ ಓದಲೇ ಬೇಕು. ಕೇವಲ 54 ಪುಟಗಳಲ್ಲಿ ಇಷ್ಟೊಂದು ವಿಷಯಗಳನ್ನು ಇಷ್ಟು ನಿಖರವಾಗಿ, ಆಪ್ತವಾಗಿ, ಓದುಗನ ಮನಸ್ಸಿಗೆ 'ಅಹುದಹುದು' ಎನ್ನಿಸುವಂತೆ ನಿರೂಪಿಸುವ ಲೇಖಕರ ಕೌಶಲ್ಯ ಅದ್ವಿತೀಯವೆನಿಸುತ್ತದೆ. ಇದನ್ನೊಂದು ಸ್ವತಂತ್ರ ಪುಸ್ತಕವಾಗಿ ಪ್ರಕಟಿಸಿದರೂ ಕನ್ನಡ ಸಾಹಿತ್ಯಕ್ಕೆ ಬೆಲೆಯುಳ್ಳ ಕೊಡುಗೆಯಾಗಬಲ್ಲದು. ಇದು ಕನ್ನಡ ಗದ್ಯದ ಅತ್ಯುತ್ತಮ ಮಾದರಿಗಳಲ್ಲೊಂದು ಎನ್ನುವುದರಲ್ಲಿ ಸಂದೇಹವಿಲ್ಲ. ಬಸವಣ್ಣನವರ 'ನುಡಿದರೆ ಮುತ್ತಿನ ಹಾರದಂತಿರಬೇಕು' ಎಂಬ ವಚನ ಇದನ್ನು ಓದಿದಾಗ ನೆನಪಾಗದಿರದು. ಶಾಸ್ತ್ರಿಗಳ ಪ್ರತಿಭೆ, ಪಾಂಡಿತ್ಯ, ಪರಿಪಕ್ವತೆ ಇಲ್ಲಿ ಮುಗಿಲು ಮುಟ್ಟಿದೆ.

> ಇಂಗ್ಲೀಷಿನಲ್ಲಿ ಬರೆಯ ಬಲ್ಲವರು ಪ್ರಪಂಚದ ಆದ್ಯಂತವೂ
> ಇದ್ದಾರೆ, ಆದರೆ ಕನ್ನಡದಲ್ಲಿ ಬರೆಯುವವರು
> ಕನ್ನಡನಾಡಿನಲ್ಲಿಯೇ ಹಲವರಿಲ್ಲ. ಈ ಸ್ಥಿತಿಗೆ, ಸಾಧನೆ
> ಸಂಪಾದನೆ ಇವುಗಳ ಅಭಾವವೇ ಕಾರಣವೆಂದು ತೋರುತ್ತದೆ.
>
> **- ಡಾ|| ಎ. ಆರ್. ಕೃಷ್ಣಶಾಸ್ತ್ರಿ**

# ಎ. ಆರ್. ಕೃಷ್ಣ ಶಾಸ್ತ್ರಿಗಳು

ಹೊಸಗನ್ನಡದ ಅಶ್ವಿನೀದೇವತೆಗಳಲ್ಲಿ ಒಬ್ಬರಾದ ಎ. ಆರ್. ಕೃಷ್ಣಶಾಸ್ತ್ರಿಗಳು 12-2-1890ರಲ್ಲಿ ಜನಿಸಿದರು. ವೇದಾಧ್ಯಯನ ಸಂಪನ್ನರಾದ ತಂದೆ ಅಂಬಳೆ ವೈ. ರಾಮಕೃಷ್ಣ ಶಾಸ್ತ್ರಿಗಳಿಂದ ಸಂಸ್ಕೃತ, ಶಾಲಾ ಕಾಲೇಜುಗಳಲ್ಲಿ ಇಂಗ್ಲೀಷು, 'ಶ್ರೀ'ಯವರ ಪ್ರಭಾವದಿಂದ ಕನ್ನಡ ಕಲಿತು ಎಂ. ಎ., ಪದವೀಧರಾದರು. ಸ್ವಂತವಾಗಿ ಬಂಗಾಳಿ, ತಮಿಳು, ತೆಲಗು, ಜರ್ಮನ್ ಭಾಷೆಗಳನ್ನೂ ಪರಿಚಯಿಸಿಕೊಂಡಿದ್ದರು. ಚಿಕ್ಕಂದಿನಲ್ಲೇ ಮಾತೃವಿಯೋಗವಾಯಿತು. ಮೈಸೂರು ಡೆಪ್ಯುಟಿ ಕಮೀಷನರ ಆಫೀಸಿನಲ್ಲಿ ಉದ್ಯೋಗ ಪ್ರಾರಂಭವಾಗಿ, ಕಾಲೇಜು, ಓರಿಯಂಟಲ್ ಲೈಬ್ರರಿಯಲ್ಲಿ ಮುಂದುವರಿದು, 1915ರಲ್ಲಿ ತಮಗೆ ಪ್ರಿಯವಾದ ಕಾಲೇಜು ಅಧ್ಯಾಪಕ ವೃತ್ತಿಯನ್ನುಪಡೆದರು. ಮುಂದೆ ಕನ್ನಡ ಅಸಿಸ್ಟೆಂಟ್ ಪ್ರೊಫೆಸರ್ (1927), ಕನ್ನಡ ಪಾಧ್ಯಾಪಕ (1939)ರಾಗಿ, ನಿವೃತ್ತರಾಗುವವರೆಗೂ (1946) ದುಡಿದು ಸಾವಿರಾರು ಶಿಷ್ಯರಿಗೆ ವಿದ್ಯಾದಾನ ಮಾಡಿದರು. ಕರ್ನಾಟಕದ ಅನೇಕ ಖ್ಯಾತನಾಮ ಸಾಹಿತಿಗಳಿಗೆ, ಸಂಘ ಸಂಸ್ಥೆಗಳಿಗೆ ಇವರ ಪ್ರೋತ್ಸಾಹ ಸಿಕ್ಕಿದೆ.

ಇವರು ವೆಂಕಟನಾರಣಪ್ಪನವರಂತೆ, "ಹೊರಗೆ ಕಟು, ಒಳಗೆ ಮೃದು". ಗೌರವವರ್ಣದ, ಮಟ್ಟಸವಾದ ಎತ್ತರದ, ಸರಳವ್ಯಕ್ತಿಯಾಗಿದ್ದ ಇವರು ತುಳುಕಾಟವಿಲ್ಲದ 'ಪೂರ್ಣ ಕುಂಭ'ದಂತಿದ್ದರು. ಕಾವ್ಯ ಶಾಸ್ತ್ರಗಳೆರಡರಲ್ಲೂ ಸಮಾನವಾದ ಗೌರವ ಪಾಂಡಿತ್ಯಗಳನ್ನು ಪಡೆದಿದ್ದ ಇವರ ಕನ್ನಡ ಸೇವೆ ಹಲವು ರೀತಿಯದು. 1918ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ 'ಕರ್ನಾಟಕ ಸಂಘ'ವನ್ನು ಸ್ಥಾಪಿಸಿವಿದ್ಯಾರ್ಥಿಗಳಲ್ಲಿ ಕನ್ನಡತನವನ್ನು ಮೈಗೂಡಿಸಿದರು. 1919ರಲ್ಲಿ 'ಪ್ರಬುದ್ಧ ಕರ್ನಾಟಕ' ತ್ರೈಮಾಸಿಕವನ್ನು ಪ್ರಾರಂಭಿಸಿ 13 ವರ್ಷಗಳವರೆಗೆ ಸಂಪಾದಕರಾಗಿ ದುಡಿದು ಪತ್ರಿಕಾ ಕ್ಷೇತ್ರದಲ್ಲೇ ಮಹತ್ವದ ಸ್ಥಾನವನ್ನು ಗಳಿಸಿದರು. 1942 ರಿಂದ 45ರ ವರೆಗೆ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಗ್ರಂಥ ಪ್ರಕಾಶನ ಸಮಿತಿಯ ಅಧ್ಯಕ್ಷರೂ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಗೆ ಕೆಲಕಾಲ ಸಂಪಾದಕರೂ ಕನ್ನಡ ನಿಘಂಟು ಸಮಿತಿಯ ಪ್ರಥಮ ಅಧ್ಯಕ್ಷರೂ ಆಗಿ ಪಾದರಸದಂತೆ ಚುರುಕಾಗಿ, ಪಾತಾಳಗರಡಿಯಂತೆ ಶೋಧಕರಾಗಿ ನಿಷ್ಠೆಯಿಂದ ಶ್ರಮಿಸಿದರು.

ಇವರ ಸಾಹಿತ್ಯ ಕೃಷಿ 1930ರಲ್ಲಿ ಪ್ರಕಟವಾದ 'ಭಾಸಕವಿ' ಗ್ರಂಥದಿಂದ 1963ರಲ್ಲಿ ಪ್ರಕಟವಾದ 'ನಿಬಂಧಮಾಲಾ'ದ ವರೆಗೆ ನಿರಂತರವಾಗಿ ನಡೆದಿದೆ. ಇವರ ಬರವಣಿಗೆಯಲ್ಲಿ ಸರಳತೆ, ಖಚಿತತೆ, ಅಚ್ಚುಕಟ್ಟುತನಗಳು ಎದ್ದು ಕಾಣುತ್ತವೆ. "ಬಂಡೆಯೊಡೆದು ಉಕ್ಕಿಬರುವ ತಿಳಿಜಲದ ಊಟೆಯಂತಿರುವ", ಕನ್ನಡ ವ್ಯಾಸ ಭಾರತವಾಗಿರುವ "ವಚನಭಾರತ" (1950), ಮಾರ್ಗದರ್ಶಕವಾಗಿರುವ ವಿಮರ್ಶಾ ಕೃತಿ "ಬಂಕಿಮಚಂದ್ರ" (1960) ಕನ್ನಡ ಅನರ್ಘ್ಯ ರತ್ನಗಳು. 'ಶ್ರೀಪತಿ' ಎಂಬ ಗುಪ್ತನಾಮದಲ್ಲಿ ಬರೆದ "ಶ್ರೀಪತಿಯ ಕತೆ'ಗಳಲ್ಲಿ, "ಅರ್ಥವಿಸಲು

ಬಾರದಂಥ ಅಗಾಧವಾದ ದುಃಖಸಾಗರದಲ್ಲಿ ಅದ್ದಿ ತೆಗೆದ ಜೀವದಕುದಿ, ಕುದಿನೆನಪಿನಲ್ಲಿ ಪಡೆದ ಸಂಸ್ಕಾರ, ಬಾಳ ತಿಳಿವು'' ಅಡಗಿದೆ. ಸಂಸ್ಕೃತ ನಾಟಕ, ಕಥಾಮೃತ, ನಾಗಮಹಾಶಯ, ಹರಿಶ್ಚಂದ್ರ ಕಾವ್ಯ ಸಂಗ್ರಹ-ಮುಂತಾದ ಕೃತಿಗಳಲ್ಲಿ ಕೂಡ ಎ. ಆರ್. ಕೃ. ಅವರ ಸ್ವೋಪಜ್ಞತೆ ನಿಚ್ಚಳವಾಗಿ ಕಂಡು ಬರುತ್ತದೆ. "ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಪುಸ್ತಕವೆಂದರೆ ಪ್ರಾಣ. ಅವರಿಗೆ ಪುಸ್ತಕವೇ ಪೂಜೆ. ಅವರಿಗೆ ಪುಸ್ತಕವೆಲ್ಲ ಪೂಜೆ.''

ಕನ್ನಡ ನವೋದಯದ ಈ ಆಚಾರ್ಯ ಪುರುಷರಿಗೆ ಕನ್ನಡಿಗರು 1956ರಲ್ಲಿ 'ಅಭಿನಂದನೆ' ಗ್ರಂಥ ಸಮರ್ಪಣೆ ಮಾಡಿದರು. 1960ರಲ್ಲಿ ಮೈಸೂರು ವಿಶ್ವ ವಿದ್ಯಾಲಯ ಗೌರವ ಡಿ. ಲಿಟ್. ಪ್ರಶಸ್ತಿ ನೀಡಿತು. 1961ರಲ್ಲಿ 'ಬಂಕಿಮಚಂದ್ರ' ಕೃತಿಗೆ ಬಹುಮಾನವಿತ್ತು ಸಾಹಿತ್ಯ ಅಕಾಡೆಮಿ ಪುರಸ್ಕರಿಸಿತು. 1941ರಲ್ಲಿ ಹೈದರಾಬಾದಿನಲ್ಲಿ ನಡೆದ 16ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಸ್ಥಾನಕ್ಕೆ ಇವರನ್ನು ಆರಿಸಿದುದು ಸೂಕ್ತವಾದ ಆಯ್ಕೆ. "ಇಂದಿನ ಜನಜೀವನದಲ್ಲಿ ಕನ್ನಡ'' ಎಂಬ ಅಧ್ಯಕ್ಷ ಭಾಷಣ ಎ. ಆರ್. ಕೃ. ಅವರ 'ಸಾಚಾ' ಕನ್ನಡತನದ ಜ್ವಲಂತ ಸಾಕ್ಷಿ.

ಕನ್ನಡ ನಾಡು ನುಡಿ ಸಂಸ್ಕೃತಿಗಳಿಗೆ ಅವಿಶ್ರಾಂತವಾಗಿ ಕನ್ನಡದ ಗರಡಿಯಾಳಾಗಿ ಅಹರ್ನಿಶಿ ದುಡಿದು ಪ್ರಾತಃಸ್ಮರಣೀಯರಾದ ಎ. ಆರ್.ಕೃ. ಅವರು 1-2-1968ರಂದು ನಿಧನರಾದರು.

**(ಕೃಪೆ: ಕನ್ನಡ ಸಾಹಿತ್ಯ ಪರಿಷತ್)**

ಆಧುನಿಕ ಯುಗದ ಮುಖ್ಯ ಲಕ್ಷಣಗಳು ಮಾನವ ಸ್ವಾತಂತ್ರ್ಯ, ಧನಸಂಪತ್ತು, ಈಗ ಪ್ರತಿಯೊಬ್ಬನೂ ಆದಷ್ಟು ಮಟ್ಟಿಗೆ ತಾನು ಸ್ವತಂತ್ರನಾಗಿರಬೇಕೆಂದು ಅಪೇಕ್ಷಿಸುತ್ತಾನೆ. ಆದರೆ ಕಾರ್ಯರೂಪದಲ್ಲಿ ಅದು ಅನೇಕವೇಳೆ ತನಗೆ ಯಾವ ಕಟ್ಟೂ ಬೇಡ, ತಾನು ಯಾರ ಮಾತನ್ನೂ ಕೇಳುವುದಿಲ್ಲ, ತನ್ನ ಇಷ್ಟಬಂದಹಾಗೆ ನಡೆದುಕೊಳ್ಳುತ್ತೇನೆ ಎಂಬಂತೆ ಸ್ವಾಚ್ಛಂದ್ಯವಾಗಿ ಪರಿಣಮಿಸುತ್ತಿದೆ. ಆದ್ದರಿಂದ ಎಲ್ಲ ವಿಧವಾದ ಕಟ್ಟುಗಳೂ ಸಡಿಲಿ, ತಂದೆ-ಮಗ, ಗಂಡ-ಹೆಂಡತಿ, ರಾಜ-ಪ್ರಜೆ, ಗುರು-ಶಿಷ್ಯ, ದೇವರು-ಭಕ್ತ ಹಾಗಿರಲಿ-ಈ ಸಂಬಂಧಗಳಲ್ಲಿ ಹಿಂದೆ ಇದ್ದ ಭಕ್ತಿ ಗೌರವಗಳು ಹೋಗುತ್ತಿವೆ.

**ಡಾ॥ ಎ. ಆರ್. ಕೃಷ್ಣ ಶಾಸ್ತ್ರಿ**

# ಶಿವರಾಮ ಕಾರಂತರ ಶಾಂತಿ ಶಿಬಿರ

- ವಿ. ಟಿ. ಎಸ್. ರಾವ್

ಎಲಾ ಇವನಾ! ಶಿವರಾಮ ಕಾರಂತರಿಗೂ ಇವನಿಗೂ ಯಾವ ಬಾದರಾಯಣ ಸಂಬಂಧ ಎಂತ ಕೇಳ್ತೀರಾ ! ಅದನ್ನೇ ನಾನೀಗ ಹೇಳಲು ಹೊರಟಿರೋದು. ಈ ಹಳೆ ಕತೆ ಹೇಳುವ ಒಂದು ಉದ್ದೇಶ, ಸುಮಾರು ಆರು ದಶಕಗಳ ಹಿಂದೆಯೆ ಕಾರಂತರ ಬಹುಮುಖ ಪ್ರತಿಭೆ. ಚಟುವಟಿಕೆ, ಗೀಳು ಮತ್ತು ದೂರದರ್ಶಿತ್ವ ಹೇಗಿತ್ತು ಎಂದು ತಿಳಿಸುವುದು; ಇನ್ನೊಂದು ಉದ್ದೇಶ. ಈ ಶತಮಾನದ ಮೊದಲಿನ ದಶಕದಲ್ಲಿ. ಇದ್ದ ಸ್ಥಿತಿ ಗತಿಗಳ ಮೇಲೆ ಅಲ್ಪಸ್ವಲ್ಪ ಬೆಳಕು ಚೆಲ್ಲುವುದು.

ಸನ್ 1927 ಮತ್ತು 1928ನೇ ಇಸವಿಯಲ್ಲಿ ನಾನು ಪುತ್ತೂರು ಬೋರ್ಡ್ ಹೈಸ್ಕೂಲಿನಲ್ಲಿ ಅಭ್ಯಾಸ ಮಾಡುತ್ತಿದ್ದೆ. ವಾಸಕ್ಕೆ ಬ್ರಾಹ್ಮಣರ ಹಾಸ್ಟೆಲ್. ಆ ಹಾಸ್ಟೆಲ್ ಕಟ್ಟಡಕ್ಕೆ ನಾವು ವಿದ್ಯಾರ್ಥಿಗಳೇ ಶ್ರಮದಾನ ಮಾಡಿದ್ದೆವು. ಆಗ ಶ್ರೀ ಕಾರಂತರು ನಮ್ಮ ಹಾಸ್ಟೆಲಿಗೆ ಆಗಾಗ ಭೇಟಿ ಕೊಡುತ್ತಿದ್ದರು. ಮತ್ತು ಪುತ್ತೂರನ್ನು ತಮ್ಮ ಕಾರ್ಯಗಳ ಮುಖ್ಯ ಕ್ಷೇತ್ರವನ್ನಾಗಿ ಮಾಡುವ ಪ್ರಯತ್ನದಲ್ಲಿದ್ದರು. ಆಮೇಲೆ ಪಟ್ಟಣದ ಕೆಲವು ಪ್ರತಿಷ್ಠಿತರ ನೆರವಿನಿಂದ 'ಬಾಲವನ' ವೆಂಬ ಶಿಶು ಕೇಂದ್ರವನ್ನು ಪಟ್ಟಣದ ಸಮೀಪದಲ್ಲಿ ಸ್ಥಾಪಿಸಿದರೆಂಬುದು ಎಲ್ಲರಿಗೂ ಗೊತ್ತಿದ್ದ ಸಂಗತಿ.

ಪುತ್ತೂರಿಗೆ ಬರುವುದಕ್ಕೆ ಮೊದಲೇ ಕಾರಂತರು 1922ನೇ ಇಸವಿಯ ಸತ್ಯಾಗ್ರಹದಲ್ಲಿ ಪಾಲುಗೊಂಡು ಕಾಲೇಜಿಗೆ ವಿದಾಯ ಹೇಳಿದ್ದರು. ಅನಂತರ ನಾಟಕ ಯಕ್ಷಗಾನ, ಗಾಯನ, ನೃತ್ಯ ಸಾಹಿತ್ಯ ಇತ್ಯಾದಿಗಳಲ್ಲಿ ಕೈಯಾಡಿಸಿ ಕೈಬಿಟ್ಟು ಹೊಸ ಯೋಜನೆ ಹೊಸ ಪ್ರಯೋಗಗಳಲ್ಲಿ ನಿರತರಾಗುತ್ತಿದ್ದರು. ಅವರೊಬ್ಬ ತ್ರಿವಿಕ್ರಮನಂತಹ ಛಲವಾದಿ.

ಶ್ರೀ ಕಾರಂತರು 1927 ಮತ್ತು 1928ನೇ ಇಸವಿಯ ಬೇಸಿಗೆ ರಜಾ ಸಮಯದಲ್ಲಿ ಶಾಲಾ ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರುಗಳಿಗೆಂದು ಒಂದು ತಿಂಗಳ ಶಿಬಿರ ಏರ್ಪಡಿಸಿದ್ದರು. ಅದಕ್ಕೆ "ಶಾಂತಿ ಶಿಬಿರ" ವೆಂಬ ಹೆಸರು.ಅದರ ಮುಖ್ಯ ಉದ್ದೇಶ, ಚಾರಣ ಪರ್ಯಟನ, ದರ್ಶನ ಮತ್ತು ಅಧ್ಯಯನ. ಇದಕ್ಕೆ ಸೇರಿದವರ ಪೈಕಿ ಕೆಲವರ ಹೆಸರುಗಳು ಮಾತ್ರ ನೆನಪಿನಲ್ಲಿ ಉಳಿದಿವೆ. ಕಾರಂತರ ಇಬ್ಬರು ಕಡೇ ತಮ್ಮಂದಿರು, ದಿವಂಗತ ಕೆ. ಜಿ. ನಾವಡ, ಶ್ರೀ ಕೆ. ಎಸ್. ಏರ್ಕಡಿತ್ತಾಯ, ಶ್ರೀ ನಾಗೇಶ ರಾವ್ (ಉಪಾಧ್ಯಾಯರು) ಮತ್ತು ಪಡುಕೋಣೆ ರಮಾನಂದ ರಾಯರ ಮಗ ಶಂಕರಿ.

ಶಾಲೆಗಳಿಗೆ ಬೇಸಿಗೆ ರಜೆ ಆರಂಭವಾದ ಕೂಡಲೆ ಏಪ್ರಿಲ್ ತಿಂಗಳ ಕೊನೇ ವಾರದಲ್ಲಿ ನಿಗದಿತ ದಿನ ಹೆಸರು ಕೊಟ್ಟವರೆಲ್ಲ 16-18 ಮಂದಿ ಪುತ್ತೂರು ಹಾಸ್ಟೆಲಿನಲ್ಲಿ ಒಟ್ಟು ಸೇರಿದೆವು.

ನಮ್ಮ ಪ್ರಯಾಣದ ಸಿದ್ಧತೆ ಎಂದರೆ, ಒಂದು ಜೊತೆ ಉಡುವ ಮುಂಡು ಅಥವಾ ಪಾಯಿಜಾಮ, ಒಂದು ಜೊತೆ ತುಂಡು ಕೈ ಶರ್ಟು, ಹಾಸುವುದಕ್ಕೆ ಒಂದು ಚಾದರ, ಹೊದಿಯುವುದಕ್ಕೆ ಒಂದು ವಲ್ಲಿ, ಒಂದು ಸ್ನಾನದ ಟವೆಲ್, ಮೈಗೆ ಮತ್ತು ಬಟ್ಟೆಗೆ ಹಾಕುವ ಸಾಬೂನು ಒಂದೊಂದು. ಅದಕ್ಕಿಂತ ಹೆಚ್ಚಿಗೆ ತೆಗೆದುಕೊಳ್ಳಬಹುದಿತ್ತು. ಆದರೆ ನಾವೇ ನಮ್ಮ ಹೊರೆಗಳನ್ನು ಹೊರಬೇಕಷ್ಟೆ. ದಾರಿ ಖರ್ಚಿಗೆ ರೂ. 10/- (ಆಗಿನ ಸಮಯದಲ್ಲಿ ಅದು ದೊಡ್ಡ ಮೊತ್ತವೆ). ಕಾಲಿಗೆ ಚಪ್ಪಲಿಲ್ಲ, ತಲೆಗೆ ಟೊಪ್ಪಿಗೆ ಇಲ್ಲ ಮತ್ತು ಛತ್ರಿ ಇಲ್ಲ, ಎಲ್ಲವನ್ನು ಒಂದು ಬಟ್ಟೆ ಚೀಲದಲ್ಲಿ ತುಂಬಿಸಿದೆವು.

ನಮ್ಮ ಪ್ರಥಮ ಪಯಣ ಬಸ್ಸಿನಲ್ಲಿ, ಪುತ್ತೂರಿನಿಂದ ಕುಂದಾಪುರಕ್ಕೆ. ಸುಮಾರು ಮಧ್ಯಾಹ್ನದ ಸಮಯದಲ್ಲಿ ಕುಂದಾಪುರಕ್ಕೆ ತಲಪಿ ಶ್ರೀ ಲಕ್ಷ್ಮೀನಾರಾಯಣ ಕಾರಂತರಲ್ಲಿ (ಕೊ. ಲ. ಕಾರಂತ-(ಶಿವರಾಮ ಕಾರಂತರ ಅಣ್ಣ) ಇಳಕೊಂಡೆವು. ಅವರ ಮನೆ ಹೆದ್ದಾರಿಯ ಸಮೀಪವೇ ಇತ್ತು. ಅವರು ನಮ್ಮನ್ನು ನಿರೀಕ್ಷಿಸುತ್ತಿದ್ದರೆಂದು ಕಾಣುತ್ತದೆ. ನಮಗೆ ಹಾರ್ದಿಕ ಸ್ವಾಗತವಿತ್ತರು. ಅವರ ಮನೆ ಸೇರುವಾಗ ಅವರು ಒಂದು ಕಬ್ಬಿಣದ ಸರಳನ್ನು ಏಸಿಡ್ ಹಾಕುತ್ತಾ ಗರಗಸದಿಂದ ಕೊಯ್ಯುತ್ತಾ ಕುಳಿತಿದ್ದರು. ಯಾರೋ ನಮ್ಮವರ ಪೈಕಿ ಒಬ್ಬರು "ಕಬ್ಬಿಣ ಕೊಯ್ಯುವ ಕಾರಂತ" ರೆಂದು ಇನ್ನೊಬ್ಬರ ಕಿವಿಯಲ್ಲಿ ಪಿಸುಗುಟ್ಟಿದ್ದು ನನ್ನ ಕಿವಿಗೆ ಬಿತ್ತು. ಅವರು ವಿಜ್ಞಾನಕ್ಕೆ ಮಾರು ಹೋದವರು. ಅವರ ಮೈಮೇಲೆ ಅಂಗಿ ಇಲ್ಲದಿದ್ದರೂ ತಲೆ ಮೇಲೆ ಗಾಂಧಿ ಟೊಪ್ಪಿ ಕುಳಿತಿತ್ತು. ಗಾಂಧಿ ಟೊಪ್ಪಿ ಬಹುಶಃ ಅವರ ತಲೆಯನ್ನು ಅಗಲಿ ಇರುತ್ತಿರಲಿಲ್ಲವೆಂದು ಕಾಣುತ್ತದೆ. ಅಪ್ಪಟ ಗಾಂಧಿವಾದಿಯಾಗಿದ್ದರು.

ಮಧ್ಯಾಹ್ನದ ಭೋಜನದ ಸಿದ್ಧತೆ ಮೊದಲೇ ಮಾಡಿದ್ದಿಬೇಕು. ಅಂದರೆ, ನಾವು ತಲುಪಿದ ಸ್ವಲ್ಪ ವೇಳೆಯಲ್ಲಿಯೇ ಊಟಕ್ಕೆ ಬಡಿಸಿದರು. ಮೇಲೋಗರಗಳನ್ನೆಲ್ಲ ತುಂಬ ತೆಂಗಿನಕಾಯಿ ಹಾಕಿ ಮಾಡಿದ್ದರಿಂದ ಭೋಜನ ಒಳ್ಳೇ ರುಚಿಕರವಾಗಿತ್ತು. ಸಾಯಂಕಾಲದ ಹೊತ್ತು ಕಡಲ ತೀರಕ್ಕೆ ಗಾಳಿ ಸಂಚಾರಕ್ಕೆಂದು ಹೋಗಿ ತಿರುಗಿ ಬಂದೆವು.

ರಾತ್ರಿಯ ಊಟದ ಏರ್ಪಾಡು ಸಹ ಅವರಲ್ಲಿಯೆ ಮಾಡಿತ್ತು. ಊಟವಾದ ಕೂಡಲೆ ಸಾಮಾನ್ಯ 8-9 ಘಂಟೆಗೆ ನಾವು ಗಂಗೊಳ್ಳಿ ಹೊಳೆಯ ದಡವನ್ನು ಕಾಲು ನಡಿಗೆಯಲ್ಲಿಯೆ ನಡೆದು ಸೇರಿದೆವು. ಅಲ್ಲಿ ತಲುಪಿದ ಮೇಲೆ ಒಬ್ಬ ಅಂಬಿಗನೊಡನೆ ಮಾತನಾಡಿ ಶಂಕರ ನಾರಾಯಣಕ್ಕೆ ನೌಕಾಯಾನ ಮಾಡುವುದಕ್ಕೆ ತೊಡಗಿದೆವು.

ನಮ್ಮ ಶಾಂತಿ ಶಿಬಿರದ ಕೂಟ ಕುಂದಾಪುರದಿಂದ ಶಂಕರನಾರಾಯಣಕ್ಕೆ ಪ್ರಯಾಣ ಮಾಡಿತು. ನೌಕಾಯಾನ ಅತ್ಯಂತ ಆಹ್ಲಾದಕರವಾಗಿತ್ತು. ಕಡಲ ಕಡೆಯಿಂದ ಬೀಸುತ್ತಿದ್ದ ತಂಪುಗಾಳಿ ನಮ್ಮ ಮೈಸವರುತ್ತಿದ್ದುದ್ದರಿಂದ ನಮಗೆಲ್ಲ ಬಹಳ ಆಪ್ಯಾಯಮಾನವಾಗುತ್ತಿತ್ತು. ಶುಕ್ಲ ಪಕ್ಷವಾದ್ದರಿಂದ ಬೆಳದಿಂಗಳು ಎಲ್ಲ ಕಡೆ ಹಿಟ್ಟು ಚೆಲ್ಲಿದಂತೆ ತೋರುತ್ತಿತ್ತು. ಶುಭ್ರ ನೀಲ ಆಕಾಶದಲ್ಲಿ ಚಂದ್ರನು ನಮ್ಮೊಡನೆ ಪ್ರಯಾಣಿಸುತ್ತಿದ್ದಂತೆ ತೋರುತ್ತಿದ್ದ.

ಆಗಾಗ ಕಾರಂತರು ತಮ್ಮ ಹಾಸ್ಯದ ಚೀಲಬಿಚ್ಚಿ ನಮ್ಮನ್ನು ಉತ್ಸಾಹಭರಿತರನ್ನಾಗಿ ಮಾಡುತ್ತಿದ್ದರು. ಹಾಡು, ಹರಟೆ ಹೊಡೆಯುತ್ತಾ ಮಧ್ಯೆ ಮಧ್ಯೆ ತೂಕಡಿಸುತ್ತಾ ದೋಣಿ ಸಾಗಿದಾಗ ರಾತ್ರಿ ಕಳೆದದ್ದೇ ಗೊತ್ತಾಗಲಿಲ್ಲ. ಬೆಳಗಾಗುವ ವೇಳೆಗೆ ನಾವು ಶಂಕರನಾರಾಯಣ ತಲುಪಿದೆವು. ಪ್ರವಾಹದ ಅಭಿಮುಖವಾಗಿ ಪ್ರಯಾಣಿಸ ಬೇಕಾದ್ದರಿಂದ ಪ್ರಯಾಣಕ್ಕೆ 6-7 ತಾಸುಗಳೇ ಹಿಡಿದವು. ದೋಣಿಯಿಂದ ಇಳಿದವರೆ, ಮುಖ ಮಾರ್ಜನ ಸ್ನಾನಾದಿಗಳನ್ನು ಹೊಳೆಯಲ್ಲಿ ಮುಗಿಸಿ ನೇರ ಶಂಕರನಾರಾಯಣ ದೇವಾಲಯದ ಕಡೆ ನಡೆದೆವು.

ಒಂದು ಮಾತು ಈ ಮೊದಲೇ ಹೇಳುವುದಕ್ಕೆ ಮರೆತೆ, ನಮ್ಮ ಪ್ರಯಾಣದ ಪೂರ್ವ ಯೋಜನೆ ಮತ್ತು ಸಿದ್ಧತೆ ಕಾರಂತರು ಮೊದಲೇ ಮಾಡಿದ್ದರು. ಯಾವ ಯಾವ ಸ್ಥಳಗಳಿಗೆ ಹೋಗಬೇಕು ಮತ್ತು ಎಲ್ಲೆಲ್ಲಿ ಉಳಕೊಳ್ಳಬೇಕೆಂಬುದನ್ನೆಲ್ಲಾ ಕಾರಂತರು ಮೊದಲೇ ಗೊತ್ತುಪಡಿಸಿಕೊಂಡಿದ್ದರು. ನಮಗೆ ಆ ಸ್ಥಳಗಳ ಮತ್ತು ಜನರ ಪರಿಚಯವಿಲ್ಲದಿದ್ದರೂ ಕಾರಂತರು ಮೊದಲೇ ತಿರುಗಾಡಿ ಪರಿಚಯ ಮಾಡಿಕೊಂಡಿದ್ದರೆಂದು ಕಾಣುತ್ತದೆ.

ಶಂಕರನಾರಾಯಣದ ದೇವಾಲಯದ ಒಂದು ಪೌಳಿಯಲ್ಲಿ ನಾವು ಇಳಿಕೊಂಡಿದ್ದೆವು. ದೇವಾಲಯದ ಅರ್ಚಕರೇ ನಮ್ಮ ಅತಿಥೇಯರು. ಅರ್ಚಕರ ಆತಿಥ್ಯ ಚೆನ್ನಾಗಿಯೆ ಇತ್ತು. ನಮ್ಮ ಊಟ ಉಪಚಾರಗಳಲ್ಲಿ ಯಾವ ತರದ ಕೊರತೆಯೂ ಇರಲಿಲ್ಲ.

ಶಂಕರನಾರಾಯಣ ಆಗ ಒಂದು ಸಣ್ಣ ಊರಾಗಿತ್ತು. ಅಲ್ಲಿಯ ದೇವತೆಯ ಹೆಸರೇ ಊರಿಗೂ ಬಂದಿದೆ. ಈ ಊರಿನ ದೈವಕ್ಕೆ ಒಂದು ಚಾರಿತ್ರಿಕ ಹಿನ್ನೆಲೆ ಇದೆ. ಹಿಂದೆ ಗುಪ್ತ ಸಾಮ್ರಾಜ್ಯದ ಕಾಲದಲ್ಲಿ ಭಾಗವತ ಸಂಪ್ರದಾಯವೆಂಬ ಮತ ಒಂದು ಹುಟ್ಟಿತ್ತು. ಈ ಮತದವರಿಗೆ, ಶಿವ ವಿಷ್ಣು ಮತ್ತು ಇತರ ದೇವತೆಗಳೊಳಗೆ ಭೇದಭಾವವಿರುವುದಿಲ್ಲ. ಎಲ್ಲ ದೇವತೆಗೂ ಸರಿಸಮಾನರೆಂದು ಅವರ ಮತ. ತತ್‌ಪರಿಣಾಮವಾಗಿ ಈ ದೇವಾಲಯವು ಸ್ಥಾಪಿಸಲ್ಪಟ್ಟಿದ್ದಿರಬೇಕು.

ಶಂಕರನಾರಾಯಣದಲ್ಲಿ ನಾವು ಮೂರು ದಿನಗಳ ಮಟ್ಟಿಗೆ ತಂಗಿದ್ದೆವು. ಈ ಮೂರು ದಿನಗಳಲ್ಲಿ, ಒಂದು ಮುಖ್ಯ ಕೆಲಸ ನಾವು ಮಾಡಿದ್ದೆಂದರೆ, ಅಲ್ಲಿಯ ದೇವಾಲಯದ ಕೆರೆಯನ್ನು, ಅದರ ಕೆಸರು ಪಾಚಿಯನ್ನೆಲ್ಲ ತೆಗೆದು ಸ್ವಚ್ಛಪಡಿಸಿದ್ದು, ಇದರೊಡನೆ ಕಾರಂತರ ಉಪನ್ಯಾಸ ಸ್ವಂತ ಹಿಂದಿ ಅಭ್ಯಾಸ ಇತ್ಯಾದಿಗಳನ್ನು ಸಹ ಮಾಡಿದ್ದೆವು. ಶಂಕರನಾರಾಯಣದಿಂದ, ನಮ್ಮ ಮುಂದಿನ ಪಯಣ ಅಮವಾಸ್ಯೆ ಬೈಲು ಕೊಡಗಿ ಕೃಷ್ಣರಾಯರೆಂಬವರಲ್ಲಿಗೆ, ಅಮವಾಸ್ಯೆ ಬೈಲು ಶಂಕರನಾರಾಯಣದಿಂದ ಸುಮಾರು 14-15 ಮೈಲು ದೂರವಿರಬಹುದೆಂದು ನನ್ನ ಅನಿಸಿಕೆ, ಕಾಡುದಾರಿ, ಕಾಲುನಡಿಗೆಯಲ್ಲಿಯೆ ಹೋಗಬೇಕು. ಅಮವಾಸ್ಯೆ ಬೈಲು ಪ್ರಕೃತಿಯ ಅಡುಂಬೊಲವಿದ್ದಂತೆ ನಮಗೆ ತೋರಿತು. ಸುತ್ತಮುತ್ತ ಗುಡ್ಡಗಾಡು, ಮಧ್ಯೆ ದೊಡ್ಡ ಬೈಲು, ಇವುಗಳ ಮಧ್ಯೆ ನಾಲ್ಕು ಸುತ್ತಿನ ಹಂಚು ಹಾಕಿದ ಭವ್ಯ ಮನೆ, ಮತ್ತು ಹಟ್ಟಿ ಕೊಟ್ಟಿಗೆ. ಎದುರಿನಲ್ಲಿ ವಿಸ್ತಾರದ ಅಂಗಳ, ಅವರ ಭವನದ ಒಂದು ಪಾರ್ಶ್ವದಲ್ಲಿ ನಾವು ಇಳಿದುಕೊಂಡಿದ್ದೆವು. ಕೊಡಗಿ ಕೃಷ್ಣರಾಯರು ಒಬ್ಬ ಶ್ರೀಮಂತ ಜಮೀನ್ದಾರರು, ಸ್ವಾತಂತ್ರ್ಯ ಚಳುವಳಿಯಲ್ಲಿ ಸಹಾನುಭೂತಿ ಇದ್ದವರು. ಶಾಂತ ಸ್ವಭಾವದವರು ಮತ್ತು ಅತಿ ಸೌಜನ್ಯಶೀಲರು, ಅವರು ಎಷ್ಟು ಶ್ರೀಮಂತರೋ ಅವರ ಹೃದಯ ಶ್ರೀಮಂತಿಕೆಯೂ ಅಷ್ಟೇ ದೊಡ್ಡದಿದ್ದಂತೆ ತೋರಿತು. ನಾವು ಅವರಲ್ಲಿ ಎರಡು ವಾರದವರೆಗೆ ಉಳಿದುಕೊಂಡಿದ್ದೆವು. ನಮಗೆ ಬೇಕಾದ ಸೌಕರ್ಯಗಳನ್ನೆಲ್ಲಾ ಸರಿಯಾಗಿ ನೋಡಿಕೊಂಡದ್ದಲ್ಲದೆ, ನಮ್ಮ ಊಟ ಉಪಚಾರದಲ್ಲಿ ಯಾವ ತರ ಕೊರತೆಯೂ ಇಲ್ಲದಂತೆ ನೋಡಿಕೊಂಡಿದ್ದರು. ನಾವು ಶಿಬಿರದವರೇ ಸುಮಾರು ಇಪ್ಪತ್ತು ಮಂದಿ ಇದ್ದೆವು. ಇಷ್ಟು ಜನರ ಸೌಕರ್ಯಗಳನ್ನು ನೋಡಿಕೊಳ್ಳುತ್ತಿದ್ದುದು ಅವರ ಹೃದಯ ಶ್ರೀಮಂತಿಕೆಯನ್ನು ತೋರಿಸುತ್ತದೆ.

ಅಮವಾಸ್ಯೆ ಬೈಲಿನಲ್ಲಿ ನಾವು ಎರಡು ವಾರ ತಳ ಊರಿದ್ದೆವು ಎಂದು ಹೇಳಿದನಷ್ಟೇ, ಅಲ್ಲಿ ಇರುವಾಗ ನಮ್ಮ ದಿನಚರ್ಯೆ ಕುರಿತು ಎರಡು ಮಾತು. ನಾವಿಲ್ಲಿರುವಾಗ ಬೆಳಿಗ್ಗೆ ಸುಮಾರು 5-5 1/2 ಗಂಟೆಗೆ ಎದ್ದು ಮುಖ ಮಾರ್ಜನೆಗಳನ್ನು ಮುಗಿಸಿ ಪ್ರಾತಃಕಾಲದ ಪ್ರಾರ್ಥನೆಗೆ ತಯಾರಾಗಬೇಕು. 6 ಗಂಟೆಯುವಳಗೆ, ಕಾರಂತರೇ ಪ್ರಾರ್ಥನೆಯನ್ನು ಸುರುಮಾಡುವಾಗ ನಾವು ಅವರೊಡನೆ ಒಟ್ಟಿಗೆ ಧ್ವನಿಕೂಡಿಸುತ್ತಿದ್ದೆವು. ಪ್ರಾರ್ಥನೆಯಲ್ಲಿ ಕೆಲವು ಪದಗಳು ಮತ್ತು ಕೆಲವು ಶ್ಲೋಕಗಳು ಇದ್ದವು.

ಗಾಂಧೀಜಿಯವರ ಅತಿಪ್ರಿಯವಾದ ವೈಷ್ಣವ ಜನತೋ, ರಘುಪತಿ ರಾಘವ ರಾಜಾರಾಮ್, ಅಸತೋಮಾ ಸತ್ಗಮಯ, ಇತ್ಯಾದಿ ಸೇರಿದ್ದವು. 'ಓಂ ಸಹನಾಭವತು...

ಶಾಂತಿ, ಶಾಂತಿ, ಶಾಂತಿಃ'' ಶ್ಲೋಕದಲ್ಲಿ ಪ್ರಾರ್ಥನೆ ಕೊನೆಗೊಳ್ಳುತ್ತಿತ್ತು. ಪ್ರಾರ್ಥನೆಯಾದ ನಂತರ, ನಮಗೆ ಕಾರಂತರೇ 14-15 ತರದ ಯೋಗಾಸನಗಳನ್ನು ಮಾಡಲಿಕ್ಕೆ ಕಲಿಸಿಕೊಟ್ಟರು. 4-5 ದಿನಗಳಲ್ಲಿಯೇ ನಾವು ಆಸನಗಳನ್ನು ಮಾಡುವುದಕ್ಕೆ ಕಲಿತುಕೊಂಡೆವು ಮತ್ತು ಅವರು ಮಾಡುತ್ತಿರುವಾಗಲೇ ಅವರೊಡನೆ ಮಾಡಲಿಕ್ಕೆ ಸುರು ಮಾಡಿದೆವು. ಎಲ್ಲರೂ ಎಳೇ ಪ್ರಾಯದವರೇ ಆದ್ದರಿಂದ ನಮಗೆ ಅವರಂತೆಯೇ ಆಸನಗಳನ್ನು ಮಾಡುವುದಕ್ಕೆ ಪ್ರಯಾಸವಾಗುತ್ತಿರಲಿಲ್ಲ. ಎಲ್ಲ ಆಸನಗಳನ್ನು ಮಾಡಿದ ನಂತರ ಪ್ರಾಣಾಯಾಮ ಮಾಡಬೇಕಾಗಿತ್ತು. ಇದು 5-10 ನಿಮಿಷಗಳ ಮಟ್ಟಿಗೆ ಮಾತ್ರ.

ಇದಾದ ನಂತರ ನಾವೆಲ್ಲರೂ ಸ್ನಾನ ಮುಗಿಸಿ ನಮ್ಮ ನಮ್ಮ ಪರಿಕರಗಳನ್ನೆಲ್ಲ ತೊಳೆದು ಬೆಳಗಿನ ಉಪಹಾರಕ್ಕೆ ತಯಾರಾಗುತ್ತಿದ್ದೆವು. ಉಪಹಾರಕ್ಕೆ ಇಡ್ಲಿ, ಅವಲಕ್ಕಿ ಉಪ್ಪುಕರಿ ಇಲ್ಲವೇ ಉಪ್ಪಿಟ್ಟು ಸಿಗುತ್ತಿತ್ತು. ಕುಡಿಯುವುದಕ್ಕೆ ಕೊತ್ತಂಬರಿ ಕಾಫಿ. ಕಾಫಿ, ಚಾದ ಪ್ರಶ್ನೆಯಿಲ್ಲ. ಮಧ್ಯಾಹ್ನ ಮತ್ತು ರಾತ್ರಿ ಸಾತ್ವಿಕ ಆಹಾರ ಅಂದರೆ, ಹುಳಿ ಕಾರ ಕಡಿಮೆ ಹಾಕಿದ ಮೇಲೊಗರಗಳನ್ನು ನಮಗೋಸ್ಕರ ಮಾಡಿ ಬಡಿಸುತ್ತಿದ್ದರು. ಸಾಯಂಕಾಲ ಪುನಃ ಸಣ್ಣ ಟಿಫಿನ್ ಸಿಗುತ್ತಿತ್ತು. ಉಪಹಾರದ ನಂತರ ನಮಗೆ ಲಾಠಿ ಬೀಸುವುದನ್ನು ಕಲಿಸುತ್ತಿದ್ದರು. ಲಾಠಿ ಬೀಸುವುದನ್ನು ಕಲಿಸುವುದಕ್ಕೆ ನಮ್ಮವರ ಪೈಕಿ ಒಬ್ಬರು ಇದ್ದರು. ಅವರು ಹಾರ್ಡಿಕರ ಸೇವಾದಳದವರಾಗಿದ್ದರು. ಮಧ್ಯಾಹ್ನ ಊಟವಾದ ನಂತರ, ನಮ್ಮಷ್ಟಕ್ಕೆ ನಾವು ಪುಸ್ತಕ ಓದುವುದು ಮತ್ತು ಹಿಂದೀ ಪಾಠ ಕಲಿಯುವುದಲ್ಲದೆ ಸ್ವತಃ ಅಭ್ಯಾಸ ಮಾಡುವುದಕ್ಕೆ ಬಿಡುತ್ತಿದ್ದರು. ಆಗ ಕಲಿತ ಹಿಂದಿಯೆ ನನ್ನಲ್ಲಿ ಈಗಲೂ ಉಳಿದಿದೆ. ಅದರ ನಂತರ ಹಿಂದಿ ಹೆಚ್ಚು ಕಲಿಯಲೇ ಇಲ್ಲ, ಅದರಲ್ಲಿ ಸ್ತ್ರೀಲಿಂಗ ಪುಲ್ಲಿಂಗ ಪ್ರಯೋಗ ಕಲಿಯುವಾಗ ನಾನು ಬೇಸ್ತು ಬಿದ್ದಿದ್ದೆ. ನಾನು ಎಳೇ ವಯಸ್ಸಿನವನಾದ್ದರಿಂದ ನನಗೆ ಒಮ್ಮೊಮ್ಮೆ ತೂಕಡಿಕೆ ಬರುತ್ತಿತ್ತು. ಎಲ್ಲರೂ ಅವರವರ ಅಭ್ಯಾಸಗಳಲ್ಲಿ ತೊಡಗಿರುವಾಗ, ಕಾರಂತರ ಲೆಕ್ಕಣಿಕೆಯಂತು ಬರೆಯುತ್ತಲೇ ಇರುತ್ತಿತ್ತು.

ಈ ಶಿಬಿರದಲ್ಲಿರುವಾಗಲೆ ಲಾಠಿ ಬೀಸುವುದನ್ನು ಕಲಿತದ್ದು. ಆದರೆ ಅದರಿಂದ ಹೆಚ್ಚಿನ ಪ್ರಯೋಜನವೇನೂ ಕಾಣಲಿಲ್ಲ. ನಿತ್ಯ ಲಾಠಿಯನ್ನು ಹಿಡಿದುಕೊಂಡು ಯಾರು ತಿರುಗುತ್ತಾರೆ? ಅದು ಪೋಲಿಸರಿಗೆ ಮಾತ್ರ ಪ್ರಯೋಜನ. ಆದರೆ ಯೋಗಾಸನಗಳ ವಿಷಯ ಹಾಗಲ್ಲ. ನಾನು ಕಲಿತ ಆಸನಗಳನ್ನು ಆಮೇಲೆ ಬಹಳ ವರ್ಷಗಳವರೆಗೆ ಮಾಡುತ್ತಿದ್ದೆ. ಅದರ ಫಲ ನಾನು ಪಡೆದಿದ್ದೇನೆ. ಕಾರಂತರೇ ದೊಡ್ಡ ದೃಷ್ಟಾಂತ. ಅವರು ಮೊನ್ನೆ ತಾನೆ ಅವರ 90ನೇ ವರ್ಷದಲ್ಲಿ ಪಾದಾರ್ಪಣೆ ಮಾಡಿದರು. ಅವರ ಊರಿನವರು ಅವರಿಗೆ ಈ ಸಂದರ್ಭದಲ್ಲಿ ಸನ್ಮಾನಿಸಿದಾಗ, ಅವರು ಗೆಜ್ಜೆ ಕಟ್ಟಿ ಕುಣಿದ ಚಿತ್ರ "ಸುಧಾ" ದಲ್ಲಿ ಬಂದದ್ದನ್ನು ಕೆಲವರು ನೋಡಿರಬಹುದು.

ಸ್ವತಃ ಅಭ್ಯಾಸ ಮುಗಿದ ನಂತರ, ಕಾರಂತರು ಏನಾದರೂ ಒಂದು ವಿಷಯ ಮಾತನಾಡುತ್ತಿದ್ದರು. ನಾಟ್ಯ, ಕಲೆ,ಸಂಗೀತ, ಇಲ್ಲವೇ ಅವರು ಬರೆಯುತ್ತಿದ್ದ ಕಾದಂಬರಿಗಳ ಕೆಲವು ಭಾಗಗಳನ್ನು ಓದಿ ಹೇಳುತ್ತಿದ್ದರು. ಅದು ಮಾತ್ರವಲ್ಲ, ನಾಟ್ಯ, ನಾಟಕದ ಪಾತ್ರಗಳು ಯಾವ ರೀತಿಯಲ್ಲಿ ಅಭಿನಯಿಸಬೇಕೆಂಬುದನ್ನು ಮಾಡಿ ತೋರಿಸುತ್ತಿದ್ದರು. ಅವರ ತೇಜಸ್ಸು, ಕಣ್ಣಿನಲ್ಲಿ ಹೊಳಪು, ನೀಳಬಿಟ್ಟ ತಲೆಕೂದಲು ಇವೆಲ್ಲ ಅವರನ್ನು ಈ ಕಲೆಗಳಿಗೆ ಹೇಳಿ ಮಾಡಿಸಿದಂತೆ ಇತ್ತು. ಮಧ್ಯೆ ಮಧ್ಯೆ ಯಕ್ಷಗಾನದಲ್ಲಿದ್ದ ಮಾತುಗಳನ್ನು ಸೇರಿಸಿ ಮಾತನಾಡುತ್ತಿದ್ದುದರಿಂದ ನಮಗೆಲ್ಲ ಬಹಳ ಖುಷಿಯಾಗುತ್ತಿತ್ತು.

ಬಿಡು ಸಮಯದಲ್ಲಿ, ಅವರು ಬರೆದ "ಡುಮ್ಮಿಂಗೊ" ಎಂಬ ಬೀದಿ ನಾಟಕದ ತಾಲೀಮು ನಡೆಸುತ್ತಿದ್ದರು. ಈ ನಾಟಕವನ್ನು ಶಂಕರನಾರಾಯಣದಲ್ಲಿ, ಅಮವಾಸ್ಯೆ ಬೈಲಿನಲ್ಲಿ ಮತ್ತೆ ಮುಂದೆ ಸಾಗರದಲ್ಲಿ ನಮ್ಮಿಂದ ಆಡಿಸಿ ತೋರಿಸಿದ್ದರು.

ನಮ್ಮ ಶಿಬಿರ ಅಮವಾಸ್ಯೆ ಬೈಲಿನಲ್ಲಿರುವಾಗ ಕಾರಂತರು ನಾಟಕ ಅಭಿನಯ, ನೃತ್ಯ ಸಂಗೀತ ಕಲೆ, ಸಾಹಿತ್ಯ ಇತ್ಯಾದಿಗಳ ಬಗ್ಗೆ ಮಾತನಾಡುತ್ತಿದ್ದುದು ಮಾತ್ರವಲ್ಲದೆ, ಸರಳ ಜೀವನ, ಆಹಾರ, ಬ್ರಹ್ಮಚರ್ಯ ಇತ್ಯಾದಿಗಳ ವಿಷಯವಾಗಿಯೂ ನಮಗೆ ಮನದಟ್ಟಾಗುವಂತೆ ತಿಳಿಯ ಹೇಳುತ್ತಿದ್ದರು. ತಂಡದ ಕಿರಿಯರ ಪೈಕಿ ನಾನೂ ಒಬ್ಬನಾದ್ದರಿಂದ ಕೆಲವು ವಿಷಯಗಳು ನನಗೆ ಪೂರ್ತಿ ಅರ್ಥವಾಗುತ್ತಿರಲಿಲ್ಲ.

ಅವರು ಬರೆದ "ಡುಮ್ಮಿಂಗೊ" ಎಂಬ ಬೀದಿ ನಾಟಕದ ಬಗ್ಗೆ ಇಲ್ಲಿ ಪ್ರಸ್ತಾಪಿಸಬೇಕು. ಆ ನಾಟಕದ ಸಾರಾಂಶವಿಷ್ಟೆ: ಒಂದು ಬ್ರಾಹ್ಮಣರ ಕುಟುಂಬಕ್ಕೆ ಕೆಲವು ಒಕ್ಕಲುಗಳು, ಮತ್ತು ಹರಿಜನ ವರ್ಗಕ್ಕೆ ಸೇರಿದ ಕೆಲಸದವರು ಸಹ ಇದ್ದರು. ಆ ಕಾಲದಲ್ಲಿ ಹರಿಜನ ಬಂಧುಗಳನ್ನು ಉಚ್ಚ ಜಾತಿಯವರ ಅಂಗಳಕ್ಕೆ ಸಹ ಕಾಲಿಡಬಾರದು, ಹಾಗಿತ್ತು ಆಗಿನ ಪರಿಸ್ಥಿತಿ. ಅನೇಕ ವರ್ಗದ ಕುಟುಂಬಗಳಿಗೆ ಇಡೀ ವರ್ಷ ಕೆಲಸವಿರುತ್ತಿರಲಿಲ್ಲ. ಆವಾಗ ಘಟ್ಟದ ಮೇಲಿನ ಕಾಫಿ ತೋಟದ ಮಾಲೀಕರ ಕಂಟ್ರಾಕ್ಟರುಗಳು, ಅಂತಹ ಕುಟುಂಬಗಳಿಗೆ ಮುಂಗಡ ಹಣಕೊಟ್ಟು ಕಾಫಿ ತೋಟದಲ್ಲಿ ಕೆಲಸ ಮಾಡಿಸುವುದಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಅವರು ಮುಂಗಡ ತೆಗೆದುಕೊಳ್ಳುತ್ತಿದ್ದ ಸಾಲ ಜೀವನ ಪರ್ಯಂತ ಮುಗಿಯುವಂತಹದ್ದಲ್ಲ. ಕೆಲವರು ಘಟ್ಟದ ಮೇಲೆ ಹೋದವರು, ಮಲೇರಿಯ ಜ್ವರಕ್ಕೆ ತುತ್ತಾಗಿ ಹಿಂದೆ ಬರುತ್ತಿರಲಿಲ್ಲ ಸಹ.

ಈ ಬ್ರಾಹ್ಮಣ ಕುಟುಂಬದ ಜೀತ ಮಾಡುತ್ತಿದ್ದ ಅಂತಹ ಒಂದು ಹರಿಜನ ಕುಟುಂಬ, ಘಟ್ಟದ ಮೇಲೆ ಕೆಲಸಕ್ಕೆಂದು ಹೋಗಿ ಅಲ್ಲಿಯೇ ನೆಲೆ ಊರಿತು, ಮತ್ತು ಒಬ್ಬ ಕ್ರಿಶ್ಚಿಯನ್ ಪಾದ್ರಿಯ ಮೂಲಕ ಮತಾಂತರ ಹೊಂದಿ ಅವರ ನೆರವಿನಿಂದ, ಕುಟುಂದ ಒಬ್ಬ ಹುಡುಗ ವಿದ್ಯಾಭ್ಯಾಸ ಮಾಡಿ ತಹಶೀಲ್ದಾರನಾಗಿ ನೇಮಿಸಲ್ಪಟ್ಟ, ಅವನ ಹೆಸರು " ಡುಮಿಂಗೊ" ಸ್ವಲ್ಪ ಸಮಯದ ನಂತರ, ಅವನು ಮೊದಲಿನ ಬ್ರಾಹ್ಮಣ ಧನಿಯ ಊರಿಗೆ ವರ್ಗಾಯಿಸಲ್ಪಟ್ಟನು. ಬ್ರಾಹ್ಮಣಧನಿಯು, ಒಂದು ಸ್ವಂತ "ಕುಮಕ್ಕು" ಪಡೆಯುವುದಕೋಸ್ಕರ ತಹಶೀಲ್ದಾರ್ ಡುಮಿಂಗೋವನ್ನು ಮನೆಗೆ ಆದರದಿಂದ ಬರಮಾಡಿಕೊಂಡು ಉಪಚರಿಸಿದರು. ಪ್ರಶ್ನೆ ಏನೆಂದರೆ, ಮತಾಂತರ ಹೊಂದಿದ ಅಸ್ಪೃಶ್ಯ ಜಾತಿಯ ತಹಶೀಲ್ದಾರನು ಆದರಣೀಯ ಹೇಗಾದನು ? ಅವನ ಅಸ್ಪೃಶ್ಯತೆ ಎಲ್ಲಿ ಹೋಯಿತು? ಈ ಸಂದೇಶವನ್ನು ತಿಳಿಸುವುದಕ್ಕಾಗಿ ಕಾರಂತರು ಬರೆದ ನಾಟಕವಿದು.

ಆ ವಿಷಯವನ್ನು ಇಲ್ಲಿ ಪ್ರಸ್ತಾಪಿಸಿದ್ದು ಯಾಕೆಂದರೆ, ಆರೇಳು ದಶಕಗಳ ಹಿಂದೆಯೇ ಕಾರಂತರ ವಿಚಾರಧಾರೆ, ದೂರದರ್ಶಿತ್ವ, ಹಿಂದುಳಿದ ವರ್ಗಗಳ ಮೇಲೆ ಅವರಿಗಿದ್ದ ಅನುಕಂಪ ಅವರ ಅತಿಜನ ಪ್ರಿಯ. " ಚೋಮನ ದುಡಿ " ಎಂಬ ಕಾದಂಬರಿಯ ವಸ್ತುವೂ ಕೂಡ ಒಂದು ಅಸ್ಪೃಶ್ಯ ಜಾತಿಗೆ ಸೇರಿದ ಕುಟುಂಬದ್ದೆ ಎಂಬ ವಿಷಯ ನಮ್ಮ ವಾಚಕರಿಗೆ ಗೊತ್ತಿರಬೇಕು.

ಎರಡು ವಾರದ ಬಳಿಕ ನಾವು ಅಮಾವಾಸ್ಯೆ ಬೈಲಿನಿಂದ ತಳಕಿತ್ತೆವು. ಮುಂದಿನ ನಮ್ಮ ಪಯಣದ ಗುರಿ ಕೊಲ್ಲೂರು. ಅಮವಾಸ್ಯೆ ಬೈಲಿನಿಂದ ಸುಮಾರು 14-15ಮೈಲು ದೂರವಿರಬಹುದು. ಬೆಳಿಗ್ಗೆ ಸ್ನಾನ ಉಪಹಾರಗಳನ್ನು ಮುಗಿಸಿ ದಾರಿಗೆ ಬುತ್ತಿ ಕಟ್ಟಿಕೊಂಡು ಹೊರಟೆವು. ಬೈಲು ಗಾಡಿಯ ರೋಲರ್ ಕಾಣದ ರಸ್ತೆ. ಮಳೆಗಾಲದಲ್ಲಿ, ಎಲೆಗಳಿಂದ ಬಿದ್ದ ಮಳೆ ನೀರಿನಿಂದ ರಸ್ತೆಗೆ ಹಾಕಿದ ಕಲ್ಲುಗಳು ಎದ್ದು ನಿಂತಿದ್ದವು. ವಾಹನ ಸಂಚಾರವೆಂದರೆ ಬರೇ ಎತ್ತಿನ ಗಾಡಿ. ಅವು ಚಲಿಸಿ ಸವೆಸಿದ ಜಾಡಿನಲ್ಲಿ ನಡೆಯಬೇಕು. ತಪ್ಪಿದರೆ ಅಂಗಾಲುತೂತಾಗುವ ಪ್ರಸಂಗ ಮಾರ್ಗದ ಇಕ್ಕೆಡಗಳಲ್ಲಿ ದಟ್ಟ ಬೆಳೆದ ಕಾನನ. ವನ್ಯ ಮೃಗಗಳು ನಿರ್ಭಿಡೆಯಾಗಿ ಅಡ್ಡಾಡುತ್ತಿದ್ದವು. ಒಂದು ಕಡೆಯಾಲ್ಲಿ ಆಗತಾನೆ ಹಾಕಿದ ಲದ್ದಿಯಿಂದ ಇನ್ನೂ ಉಗಿ ಬರುತ್ತಿದ್ದುದನ್ನು ನೋಡಿದೆವು. ನಮ್ಮೆಲ್ಲರ ಕೈಯಲ್ಲಿಯೂ ಒಂದೊಂದು ಲಾಠಿ ಇದ್ದಿತ್ತು. ಅದು ನಮ್ಮ ಮನಸ್ಸಿನ ಸಮಾಧಾಕ್ಕೆ ಮಾತ್ರ . ಮಂತ್ರವಾದಿಯು ಮಂತ್ರಿಸಿ ಕುತ್ತಿಗೆಗೆ ಹಾಕಲಿಕ್ಕೆ ಕೊಟ್ಟ ತಾಯಿತದಂತೆ ಯಾಕೆಂದರೆ ಆನೆ ಅಥವಾ ಹುಲಿಯಂತಹ ಕ್ರೂರ ಪ್ರಾಣಿ ನಮ್ಮ ಮೇಲೆ ಎರಗಿತೆಂದರೆ, ಆತ್ಮರಕ್ಷಣೆ ಅಸಂಭವ. ದಾರಿ ಉದ್ದಕ್ಕೂ, ಮಾರ್ಗದಮೇಲೆ ನೆರಳು ಬಿದ್ದುದರಿಂದ, ಬಿಸಿಲ ಬೇಗೆ ನಮ್ಮನ್ನು ಹೆಚ್ಚು ಬಾಧಿಸಲಿಲ್ಲ, ಮಧ್ಯಾಹ್ನದ ಹೊತ್ತಿಗೆ ಒಂದು ತೊರೆಯ ಹತ್ತಿರ ಕೂತು ತಂದ ಬುತ್ತಿ ಬಿಚ್ಚಿ ಹೊಟ್ಟೆ ಗಟ್ಟಿ ಮಾಡಿ, ಪ್ರಯಾಣ ಮುಂದುವರಿಸಿದೆವು. ಅಂತು ಸಂಜೆಯ ವೇಳೆಗೆ ಕೊಲ್ಲೂರನ್ನು ತಲುಪಿದೆವು. ಅಲ್ಲಿ ಸಹ ದೇವಸ್ಥಾನದ ಅರ್ಚಕರೇ ನಮ್ಮ ಊಟ ವಸತಿಗಳಿಗೆ ವ್ಯವಸ್ಥೆ ಮಾಡಿದ್ದರೆಂತ ನನ್ನ ನೆನಪು.ಕೊಲ್ಲೂರು ಎಲ್ಲರಿಗೂ ತಿಳಿದಂತೆ, ಮುಕಾಂಬಿಕಾ ದೇವಾಲಯಕ್ಕೆ ಸುಪ್ರಸಿದ್ದ. ಮುಕಾಂಬಿಕಾ ದೇವಾಲಯವು ಬಹು ಪುರಾತನವಾಗಿದ್ದು ಜಿಲ್ಲೆಯ ನಾಲ್ಕು ಸುಪ್ರಸಿದ್ಧ ಯಾತ್ರಾ ಸ್ಥಳಗಳಲ್ಲಿ ಒಂದಾಗಿದೆ. ಇತರ ಮೂರು-ಉಡುಪಿ, ಧರ್ಮಸ್ಥಳ ಮತ್ತು ಸುಬ್ರಹ್ಮಣ್ಯ. ಮುಕಾಂಬಿಕಾ ದೇವತೆಗೆ, ಧರ್ಮಸ್ಥಳ, ಸುಬ್ರಹ್ಮಣ್ಯ ದೇವತೆಗಳಿರುವಂತೆ ಬಹಳ ಕಾರ್ಣಿಕವಿದೆ ಎಂಬ ಪ್ರತೀತಿ, ಹಾಗಾಗಿ ಈದೇವತೆಯ ದರ್ಶನಕ್ಕಾಗಿಯೂ ಊರು-ಪರ ಊರುಗಳಿಂದ, ಭಕ್ತರು ಯಾತ್ರಿಗಳು, ಪ್ರವಾಸಿಗಳು ಎಲ್ಲ ಋತುಗಳಲ್ಲಿಯೂ ಇತ್ತ ಬರುತ್ತಿರುತ್ತಾರೆ.

ದೇವಾಲಯದ ಸುತ್ತ ಮುತ್ತ ದಟ್ಟ ಕಾಡು, ದೇವಾಲಯವನ್ನು ಪ್ರವೇಶಿಸುವಾಗ ನಮ್ಮಲ್ಲಿ ಭಯ ಭಕ್ತಿಗಳೆರಡೂ ಉದ್ಭವಿಸುತ್ತದೆ. ಯಾರೋ ಅಲ್ಲಿಯ ಸ್ಥಳೀಕರೊಬ್ಬರು, ಅಲ್ಲಿ ತಣ್ಣೀರು ಕುಡಿಯಬಾರದೆಂದು ನಮ್ಮನ್ನು ಎಚ್ಚರಿಸಿದ್ದರು. ಯಾಕೆಂದರೆ, ಸುತ್ತಲೂ ಕಾಡು ತುಂಬಿದ್ದುದರಿಂದ, ಕೊಲ್ಲೂರು ಮಲೇರಿಯ ಜ್ವರದ ಗೂಡಾಗಿತ್ತು ಆ ಕಾಲದಲ್ಲಿ. ಕೊಲ್ಲೂರಿಗೆ ತಲುಪಿದ ಮಾರನೆಯ ದಿನವೇ ನಾವು ಅಲ್ಲಿಂದ ಕಂಬಿಕಿತ್ತೆವು. ಮುಂದಿನ ಪಯಣದ ಗುರಿ ಕೊಟಚಾದ್ರಿ ಪರ್ವತಾರೋಹಣ.

ಕೊಲ್ಲೂರಿನಿಂದ, ಪರ್ವತದ ಬುಡಕ್ಕೆ ಸುಮಾರು 10-12ಮೈಲು ದೂರ, ಕೊಟಚಾದ್ರಿಯ ದಕ್ಷಿಣ ಕನ್ನಡ ಮತ್ತು ಶಿವಮೊಗ್ಗಾ ಜಿಲ್ಲೆಗಳ ಗಡಿಪ್ರದೇಶದಲ್ಲಿದ್ದು, ಸಹ್ಯಾದ್ರಿ ಪರ್ವತ ಶ್ರೇಣಿಯ ಅತಿ ಉನ್ನತ ಶಿಖರಗಳಲ್ಲಿ ಒಂದು. ಎತ್ತರ ಸಮುದ್ರ ಮಟ್ಟದಿಂದ ಸುಮಾರು

6,750 ಅಡಿ.ಕೊರಕಲು ಕಚ್ಚಾ ರಸ್ತೆ ಯಲ್ಲಿ ಬೆಟ್ಟದ ಬುಡಕ್ಕೆ ನಡೆದು ಹೋಗಬೇಕು, ರಸ್ತೆ ಯ ಇಕ್ಕೆಡೆಗಳಲ್ಲಿ ದಟ್ಟ ಅರಣ್ಯ, ಕಾಡು ಮೃಗಗಳ ಆವಾಸಸ್ಥಾನ. ವನ್ಯ ಮೃಗಗಳು ಅಬಾಧಿತವಾಗಿ ತಿರುಗುತ್ತಿರುವ ಪ್ರದೇಶ. ಬೆಟ್ಟದ ಬುಡದಿಂದ ಶಿಖರಕ್ಕೆ ಸುಮಾರು 21/2 ಗಂಟೆಗಳ ಕಾಲು ದಾರಿ. ಎರಡು ಕಡೆಗಳಲ್ಲಿಯೂ ಹುಲುಸಾಗಿ ಬೆಳೆದ ಹುಲ್ಲಿನ ಹೊದಿಕೆ.

ಬೆಟ್ಟದ ಬುಡದಲ್ಲಿಯೆ ತಂದಿದ್ದ ಬುತ್ತಿಯ ಸ್ವಲ್ಪ ಭಾಗವನ್ನು ತಿಂದು ಪರ್ವತಾರೋಹಣ ಆರಂಭಿಸಿದೆವು. ಶಿಖರಕ್ಕೆ ಸಮೀಪಿಸುತ್ತಾ ಬರುತ್ತಿದ್ದಂತೆ ಶಿಖರವು ಕಡಿದಾಗಿ ಜಿಗಿದು ನಿಂತಂತ್ತಿತ್ತು. ಸಂಜೆ ಸುಮಾರು 3-4ಗಂಟೆಗೆ ಶಿಖರವನ್ನು ತಲುಪಿದೆವು. ಯಾರೋದಾರಿಯಲ್ಲಿ ಕಾಣಸಿಕ್ಕಿದವರೊಬ್ಬರು ಕಾರ್ಕೋಟದವೆಂಬ ದೊಡ್ಡ ಜಾತಿಯ ಸರ್ಪ ಬೆಟ್ಟ ಹತ್ತುವಾಗ ಕಾಣಲಿಕ್ಕೆ ಸಿಕ್ಕುವ ಸಂಭವವಿದೆ ಅಂತ ಹೇಳಿದ್ದರು. ಹಾಗಾಗಿ ನಮ್ಮನ್ನು ಒಂದು ತರದ ಭೀತಿ ಆವರಿಸಿದ್ದರೂ ಸಹ, ನಮ್ಮ ಉತ್ಸಾಹದ್ದೇ ಮೇಲ್ಗೈಯಾಗಿತ್ತು.

ಶಿಖರದ ಮೇಲೆ ನಿಂತು ಸುತ್ತ ಕಣ್ಣು ಹಾಯಿಸಿದಾಗ ಮೂಕ ವಿಸ್ಮಿತರಾಗಿ ನಿಂತೆವು. ಪೂರ್ವ ದಿಕ್ಕಿನಲ್ಲಿ ತಾನು ಎತ್ತರ ಎಂದು ಹೇಳುವಂತೆ ತೋರುವ ಸಹ್ಯಾದ್ರಿ ಶಿಖರಗಳು. ಕೆಳಗೆ ಇಣುಕಿ ನೋಡಿದರೆ ಮನಸ್ಸು ಹೌಹಾರುವಂತೆ ಮಾಡುವ ಕಂದರಗಳು, ಕಣಿವೆಗಳು, ನಿತ್ಯ ಹರಿದ್ವರ್ಣದ ನಿಬಿಡಾರಣ್ಯ. ಪಶ್ಚಿಮ ದಿಕ್ಕಿನಲ್ಲಿ ವಿಸ್ತಾರವಾಗಿ ಮೈಚಾಚಿದ ದಕ್ಷಿಣ ಕನ್ನಡ ಜಿಲ್ಲೆ. ಅದನ್ನು ಮೇಲಿನಿಂದ ವೀಕ್ಷಿಸುವಾಗ ಅದು ಪಾತಾಳ ಲೋಕದಲ್ಲಿದ್ದಂತೆ ತೋರುತ್ತಿತ್ತು. ಸುತ್ತಲಿನ ವನರಾಶಿಯು ಕಣ್ಮನಗಳೆರಡನ್ನೂ ತಣಿಸುವಂತಹ ಅನುಭವ. ತಿಳಿಮೋಡಗಳ ಪದರುಗಳು ನಮ್ಮನ್ನು ಹಾದು ಗಾಳಿಯಲ್ಲಿ ತೇಲುತ್ತ ಹೋಗುತ್ತಿದ್ದವು. ತಂಪು ಗಾಳಿಯು ನಮ್ಮ ಮೈಸವರಿ ಬೀಸುತ್ತಿದ್ದುದರಿಂದ ಬೆಟ್ಟವನ್ನೇರಿದ ಆಯಾಸವೆಲ್ಲ ಕ್ಷಣದಲ್ಲಿ ಮಾಯ.

ಶಿಖರದ ಮೇಲೆ ಒಂದು ಪುಟ್ಟ ಕೆರೆ, ಅದರ ನೀರು ಕನ್ನಡಿಯಂತೆ ಹೊಳೆಯುತ್ತಿತ್ತು. ಪಕ್ಕದಲ್ಲಿಯೇ ಒಂದು ಪುಟ್ಟ ದೇವಾಲಯ, ಪರ್ವತೇಶ್ವರವೆಂದು ದೇವತೆಯ ಹೆಸರು. ಅದರ ಪೂಜೆಗಾಗಿ ಒಬ್ಬ ಏಕಾಂಗಿ ಅರ್ಚಕರು, ಗುಡಿಸಲು ಎಂದೇ ಹೇಳಬಹುದಾದ ಒಂದು ಸಣ್ಣ ಮನೆ ಮಾಡಿಕೊಂಡು ಅಲ್ಲಿಯೆವಾಸವಿದ್ದರು. ಅವರ ಸಂಗಾತಿಗಳೆಂದರೆ ಗಿಡಮರಗಳು ವನ್ಯಜೀವಿಗಳು. "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದೊಡೆಂತಯ್ಯ" ಎಂಬ ಕವಿಯ ಮಾತು ಅವರಿಗೆ ಅಕ್ಷರಶಃ ಸಲ್ಲುತ್ತದೆ. ಒಮ್ಮೊಮ್ಮೆ ಕಾಡು ಪ್ರಾಣಿಗಳು ಅವರ ಸಖ್ಯ ಬೆಳೆಸುವುದಕ್ಕೆ ಬರುವುದುಂಟಂತೆ. ಇಲ್ಲದೆ ಹೋದರೆ ಮನುಷ್ಯ ಸಂಪರ್ಕ ನಮ್ಮಂತಹ ಚಾರಣರು ಹೋದರೆ ಉಂಟು. ಇಲ್ಲವೇ ಅವರು ಬೆಟ್ಟ ಇಳಿದು, ಸುತ್ತಲಿನ ಹಳ್ಳಿಗಳಿಗೆ ತನ್ನ ಜೀವನಾವಶ್ಯಕ ವಸ್ತುಗಳನ್ನು ತರುವುದಕ್ಕೆ ಹೋದಾಗ. ಆ ಬೆಟ್ಟದ ತಲೆಯಲ್ಲಿ ಸದಾ ಚಳಿಗಾಳಿ, ಮಳೆಯನ್ನು ಏಕಾಂಗಿಯಾಗಿ ಜೀವನವನ್ನು ನಡೆಸುವುದಕ್ಕೆ ಇಷ್ಟೊಂದು ಮನೋದಾಢ್ಯತೆ ಬೇಕು ! ಅದೊಂದು ತಪಶ್ಚರ್ಯೆಯ ಜೀವನ !

ಕೊಟಚಾದ್ರಿ ಪರ್ವತದ ತುದಿಯಲ್ಲಿ ಸುತ್ತ ಅವಲೋಕಿಸುತ್ತಾ ನಿಂತಾಗ ದಿನಕರನು ಪಶ್ಚಿಮ ದಿಗಂತದಲ್ಲಿ ಅಸ್ತಮಿಸುವುದಕ್ಕೆ ತೊಡಗಿದ. ಶಿಖರದ ಮೇಲೆ ರಾತ್ರಿ ನಾವು ತಂಗುವ ಹಾಗಿಲ್ಲ. ಅಲ್ಲಿಯ ಭಟ್ಟರ ಮನೆಯಲ್ಲಿಯ ಜಾಗ ಅವರಿಗೇ ಸಾಲದು. ಅಲ್ಲದೆ ರಾತ್ರಿ ಚಳಿಯನ್ನು

ಎದುರಿಸುವುದಕ್ಕೆ ಬೇಕಾದ ಹೊದಿಕೆಗಳನ್ನು ನಾವು ತೆಗೆದುಕೊಂಡು ಹೋಗಿರಲಿಲ್ಲ. ಆದ್ದರಿಂದ ಹೊತ್ತಿರುವಾಗಲೇ ಬೆಟ್ಟ ಇಳಿಯತೊಡಗಿದ್ದೆವು. ಅವರೋಹಣ ಹೆಚ್ಚು ಸಮಯ ತೆಗೆದುಕೊಳ್ಳಲಿಲ್ಲ. ನಡಿಗೆ ಮುಂದುವರಿಸುತ್ತಿದ್ದಾಗ ಒಂದು ಹೊಲ ಕಾಣಸಿಕ್ಕಿತ್ತು. ಅದರ ಪಕ್ಕದಲ್ಲಿಯೆ ಒಂದು ಹುಲ್ಲಿನ ಮನೆ ಸಹ. ಹೊಲ ಉತ್ತು ಹದ ಮಾಡಿದ್ದರು.

ಕೃಷ್ಣ ಪಕ್ಷದ ರಾತ್ರಿಯಾದ್ದರಿಂದ ಕತ್ತಲು ಕವಿಯಿತೆಂದರೆ ಅರಣ್ಯ ಮಾರ್ಗದಲ್ಲಿ ಪಯಣ ಮುಂದುವರಿಸುವುದು ಅಭದ್ರವೆಂದು ಯೋಚಿಸಿ ಆಹೊಲದಲ್ಲಿಯೇ ನಾವು ತಳ ಊರಿದೆವು. ತಂದಿದ್ದ ಬುತ್ತಿಯನ್ನು ಹಂಚಿಕೊಂಡು ಹೊಟ್ಟೆ ಉರಿಯನ್ನು ಸ್ವಲ್ಪ ಮಟ್ಟಿಗೆ ಉಪಶಮನಮಾಡಿಕೊಂಡೆವು. ನಮ್ಮ ಲೆಕ್ಕಾಚಾರ ತಪ್ಪಿಹೋಯಿತು. ನಾವು ಕಟ್ಟಿಕೊಂಡು ಬಂದ ಬುತ್ತಿ ಎಲ್ಲಿಗೂ ಸಾಲದು. ಮೊದಲೇ, ವ್ಯಾಯಾಮ ಮಾಡುತ್ತಿದ್ದುದರಿಂದ ನಮ್ಮ ಜಠರಾಗ್ನಿ ಚೆನ್ನಾಗಿ ಉರಿಯುತ್ತಿತ್ತು. ಸಾಲದ್ದಕ್ಕೆ ಚಾರಣ ಬೇರೆ.

ಆಗ ನೆನಪಾಯಿತು ಗಾದೆ:- "ಹೇಳಿಕೊಟ್ಟ? ಬುತ್ತಿ ಎಲ್ಲಿಯತನಕ ಬರುವುದು".
ನಮ್ಮಂತಹವರನ್ನು ನೋಡಿ ಹೊಲದವನಿಗೆ ದಿಗಿಲಾಗಿರಬೇಕು. ನಮ್ಮ ಕೈಯಲ್ಲಿ ಒಂದೊಂದು ಲಾಠಿ ಇದ್ದುದು ಬೇರೆ, ಅವನು ದಿಗಿಲಾಗುವುದು ಸಹಜವೇ. ನಾವು ಒಂದು ಗುಂಪಾಗಿ ಕೈಯಲ್ಲಿ ಲಾಠಿಇಟ್ಟುಕೊಂಡು ಸಂಚರಿಸುತ್ತಿದ್ದುದರಿಂದ ಪೋಲೀಸರ ಕಾಕದೃಷ್ಟಿ ಸಹ ನಮ್ಮ ಮೇಲೆ ಕೆಲವು ಕಡೆ ಬಿದ್ದಿತ್ತು. ಆ ಹೊಲದವನು ನಮ್ಮನ್ನು ವಿಚಾರಿಸಲಾಗಿ ಸಂಗತಿ ಎಲ್ಲವನ್ನು ವಿವರಿಸಿ ಹೇಳಿದಾಗ ಅವನಿಗೆ ಸಮಾಧಾನವಾದ್ದರಿಂದ ನಾವು ಆ ಹೊಲದಲ್ಲಿ ಉಳಕೊಳ್ಳುವುದಕ್ಕೆ ಆಕ್ಷೇಪಿಸಲಿಲ್ಲ.

ಹೊಲವನ್ನು ಉತ್ತು ನೈಸಾಗಿ ಪುಡಿಮಾಡಿದ್ದರಿಂದ , ಉತ್ತ ಮಣ್ಣನ್ನೇ ಹಾಸಿಗೆ ಮತ್ತು ತಲೆ ದಿಂಬಿನಂತೆ ಮಾಡಿಕೊಂಡು ಅದರ ಮೇಲೆ ನಮ್ಮ ವಸ್ತ್ರವನ್ನು ಹಾಸಿ ನಾವು ಮಲಗಿದವರಿಗೆ? ನಮ್ಮ ಹೊದಿಕೆ ಎಲ್ಲ ಒದ್ದೆಯಾಗಿತ್ತು. ಅಲ್ಲಿಯೇ ನಮ್ಮ ಪ್ರಾತರ್ವಿಧಿಗಳನ್ನು ಮುಗಿಸಿ ನಮ್ಮ ಪಯಣ ಮುಂದುವರಿಸಿದೆವು.

ನಮ್ಮ ಮುಂದಿನ ಗುರಿ, ಜೋಗು ಜಲಪಾತ ದರ್ಶನ, ಆದರೆ 'ನಮ್ಮ ನಡಿಗೆ ಸಾಗಬೇಕಾದರೆ ಹೊಟ್ಟೆಗೆ ಏನಾದರೂ ಬೀಳಬೇಕಷ್ಟೆ'. ಎಂತ ನೆಪೋಲಿಯನ್ ಹೇಳಿದ್ದನಂತೆ. ಅದು ಚಾರಣರಿಗೂ ಟ್ರೆಕ್ಕಿಂಗ್ ಮಾಡುವವರಿಗೂ ಅನ್ವಯಿಸುತ್ತದೆ. ಆವಾಗ್ಗೆ ಹಳ್ಳಿಗಳಿಗೆ ಹೋಟೆಲುಗಳು ಇನ್ನೂ ಪ್ರವೇಶಿಸಿರಲಿಲ್ಲ. ನಾವು ಹಳ್ಳಿಗಳನ್ನು ದಾಟಿ ಹೋಗುವಾಗ ಬಾಳೆ ಹಣ್ಣುಗಳು ಸಿಕ್ಕಿದ್ದರಿಂದ ಅವುಗಳನ್ನೇ ತಿಂದು ಹೊಟ್ಟೆ ತಣ್ಣಗೆ ಮಾಡಿಕೊಳ್ಳಬೇಕಾಯಿತು. ಆದರೂ ಈ ಬಗ್ಗೆ ನಮ್ಮ ತಂಡದ ಕೆಲವರಿಗೆ ಅತೃಪ್ತಿ ಆಗಿತ್ತು. ಜೊತೆಗೆ ಕಾರಂತರ ವೇಗದ ನಡಿಗೆಯೂ ಸೇರಿಕೊಂಡಿತ್ತು. ನಮ್ಮವರ ಪೈಕಿ ಕೆಲವರು ತಮ್ಮ ಹಾಸ್ಯ ಚಟಾಕಿಯಿಂದ ನಮ್ಮನ್ನೆಲ್ಲ ಆಗಾಗ ಹುರಿದುಂಬಿಸುತ್ತಿದ್ದರು. ನಾನು ಮಾತ್ರ ಕಾರಂತರೊಡನೆ ಸರಿಸರಿ ಹೆಜ್ಜೆ ಇಡುತ್ತಿದ್ದೆ. ಅದಕ್ಕಾಗಿ ಅವರಿಗೆ ನನ್ನ ಮೇಲೆ ಮೆಚ್ಚುಗೆ ಇತ್ತು. ನನಗೆ ಸಂಗೀತದ ಗಂಧವೇನೂ ಇಲ್ಲದಿದ್ದರೂ, ಕೆಲವು ರಾಗಗಳ ಹೆಸರುಗಳು ಗೊತ್ತಿದ್ದುದ್ದರಿಂದ, ಕಾರಂತರನ್ನು, " ಶಂಕರಾಭರಣ ಹಾಡಿ, ತೋಡಿ ರಾಗ ಹಾಡಿ, ಕಲ್ಯಾಣಿ ರಾಗ ಹಾಡಿ" ಎಂದು ಕೇಳುತ್ತಿದ್ದೆ. ಅವರು ಹಾಡುಗಳನ್ನು ಹಾಡಿತೋರಿಸುತ್ತಿದ್ದರು ಕೂಡಾ. ಹಾಗೂ ಹೀಗೂ ಸುಮಾರು 11-12 ಗಂಟೆಯ ಹೊತ್ತಿಗೆ ನಾವು ಜೋಗು ಜಲಪಾತವನ್ನು ತಲುಪಿದೆವು.

ಜೋಗು ಜಲಪಾತ ಶಿವಮೊಗ್ಗ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಎಲ್ಲೆಯಲ್ಲಿದೆ. ಶರಾವತಿ ನದಿಯು ಶಿವಮೊಗ್ಗದ ಸಹ್ಯಾದ್ರಿ ಬೆಟ್ಟಗಳೊಂದರಲ್ಲಿ ಉಗಮಿಸಿ ಕಾರವಾರದಲ್ಲಿ ಅರಬ್ಬಿ ಸಮುದ್ರವನ್ನು ಸೇರುತ್ತದೆ. ಜಲಪಾತ ಎರಡು ಜಿಲ್ಲೆಗಳ ಎಲ್ಲೆಗಳಲ್ಲಿದ್ದ ಕಾರಣ, ಅದು ಹಿಂದಿನ ಬೊಂಬಾಯಿ ಅಧಿಪತ್ಯ ಮತ್ತು ಮೈಸೂರು ಸಂಸ್ಥಾನಕ್ಕೂ ಸೇರಿತ್ತು. ಜಲಪಾತ ನಾಲ್ಕು ಭಾಗವಾಗಿ ಧುಮುಕುತ್ತದೆ. ಅದರಲ್ಲಿ ಎರಡು ಭಾಗ ಮೈಸೂರು ಸಂಸ್ಥಾನಕ್ಕೆ ಇನ್ನೆರಡು ಭಾಗ ಬೊಂಬಾಯಿ ಅಧಿಪತ್ಯಕ್ಕೆ ಒಳಗಾಗಿದ್ದವು. ಹಾಗಾಗಿ ಎರಡೂ ಸರ್ಕಾರಗಳು ಜಲಪಾತದ ಇಕ್ಕೆಡೆಗಳಲ್ಲಿ ಅವರ ಪ್ರವಾಸಿ ಬಂಗ್ಲೆಗಳನ್ನು ಕಟ್ಟಿಸಿದ್ದರು. ಮತ್ತು ಅಲ್ಲಲ್ಲಿ ಜಲಪಾತದ ಸೊಬಗನ್ನು ವೀಕ್ಷಿಸುವುದಕ್ಕಾಗಿ ಆಸನಗಳನ್ನು ಕಟ್ಟಿಸಿದ್ದರು. ಆ ಸಮಯದಲ್ಲಿ ಲಿಂಗನಮಕ್ಕಿ ಆಣೆಕಟ್ಟು ಇರಲಿಲ್ಲವಾದ ಕಾರಣ ಶರಾವತಿಯು ಬೇಸಿಗೆಯಲ್ಲಿ ಸಹ ತುಂಬಿದ ಪಾತ್ರದಲ್ಲಿ ಹರಿಯುತ್ತಿದ್ದಳು. ಜಲಪಾತಕ್ಕೆ ಸಮೀಪಿಸುತ್ತಾ ಬರುವಾಗಲೆ, ತುಂತುರು ಹನಿಗಳು ಗಾಳಿಯಲ್ಲಿ ತೇಲಿಕೊಂಡು ಒಂದು ಪನ್ನೀರು ದಾನಿಯಿಂದ ಮುಖದ ಮೇಲೆ ಸಿಂಪಡಿಸುವಂತೆ ಭಾಸವಾಗುತ್ತಿತ್ತು. ಜಲಪಾತದ ಭೋರ್ಗರೆತ ಒಂದೆರಡು ಫರ್ಲಾಂಗು ದೂರದಿಂದಲೇ ಕೇಳಿಬರುತ್ತಿತ್ತು.

ಶರಾವತಿ ನದಿಯು ನಾಲ್ಕು ಭಾಗವಾಗಿ 960 ಅಡಿಗಳಷ್ಟು ಎತ್ತರದಿಂದ ಧುಮುಕುತ್ತದೆ. ರಾಜಾ, ರೋರರ್, ಲೇಡೀ, ರಾಕೆಟ್ ಎಂದು ಅವುಗಳು ಧುಮುಕುವ ರೀತಿಯ ಮೇಲೆ ಹೆಸರಿಸಲ್ಪಟ್ಟಿವೆ. ಈ ನಾಲ್ಕು ಭಾಗಗಳ ಮಧ್ಯ ಮಧ್ಯದಲ್ಲಿ ಬಂಡೆಗಳಿವೆ. ಅವುಗಳು ಜಿಗಿಯುವ ವೈಭವವನ್ನು ನೋಡಬೇಕಾದರೆ, ಆ ಬಂಡೆಗಳ ಮೇಲೆ ಬೋರಲಾಗಿ ಮಲಗಿ ನೋಡಬೇಕು. ಧೈರ್ಯಕ್ಕೋಸ್ಕರ ಇನ್ನೊಬ್ಬರು ನೋಡುವವನ ಕಾಲುಗಳನ್ನು ಹಿಡಿದು ಕೊಂಡರೆ,ಕೆಳಗೆ ತಳದವರೆಗೆ ನೋಡಬಹುದು. ಅದಲ್ಲದೆ ಬೇರೆ ಬೇರೆ ಆಸನಗಳ ಕೋನದಿಂದ ಜಲಪಾತವನ್ನು ವೀಕ್ಷಿಸುವಾಗ ಅದರ ರುದ್ರ ರಮಣೀಯತೆಯ ವೈವಿಧ್ಯತೆಯನ್ನು ನೋಡಿ ಆನಂದಿಸಬಹುದು. ಅದೊಂದು ಪ್ರಕೃತಿಯ ಅದ್ಭುತ ದೃಶ್ಯ.

ಲಿಂಗನಮಕ್ಕಿ ಅಣೆಕಟ್ಟು ಬಂದ ನಂತರ ಜಲಪಾತ ತನ್ನ ಹಿಂದಿನ ವೈಭವವನ್ನು ಕಳೆದುಕೊಂಡಿದೆ.ಜೋಗು ಜಲಪಾತವನ್ನು ಗೇರುಸೊಪ್ಪಾ ಜಲಪಾತವೆಂತಲೂ ಕರೆಯುತ್ತಿದ್ದುದುಂಟು. ಆದರೆ ಗೇರುಸೊಪ್ಪಾ ಎಂಬ ಊರು ಜಲಪಾತದಿಂದ ಸುಮಾರು 15-16 ಮೈಲುಗಳ ಅಂತರದಲ್ಲಿದೆ. ಜೋಗು ಜಲಪಾತವನ್ನು ಮನತಣಿಯುವಂತೆ ವೀಕ್ಷಿಸಿ ಆನಂದಿಸಿ ಅಲ್ಲಿಂದ ಪಯಣ ಮುಂದುವರಿಸಿದೆವು. ಹೊರಡುವುದಕ್ಕೆ ಮೊದಲು ಅಲ್ಲಿಯೇ ಸಿಗುತ್ತಿದ್ದ ಉಪಹಾರ ಮತ್ತು ತಿಸಿಸುಗಳಿಂದ ಹೊಟ್ಟೆ ದಾರಿಗೂ ಕಟ್ಟಿಸಿಕೊಂಡು ನಮ್ಮ ತಂಡ ಮುಂದೆ ಸಾಗಿತ್ತು. ಗೇರುಸೊಪ್ಪಾಕ್ಕೆ ಕೊರಕಲು ಕಚ್ಚಾ ಇಳಿಜಾರು ರಸ್ತೆಯಲ್ಲಿ ನಡೆದು ಹೋಗಬೇಕು. ಮೊನಚಾದ ಕಲ್ಲುಗಳಿದ್ದುದರಿಂದ ಅಂಗಾಲು ತೂತಾಗುವ ಸಂಭವವೂ ಇತ್ತು. ಮೊದಲೇ ಹೇಳಿದಂತೆ, ನಮ್ಮನ್ನು ಹಸಿವೆ ಬಳಲಿಕೆ ಎರಡೂ ಬಾಧಿಸುತ್ತಿದ್ದವು. ಏನು ಸಿಕ್ಕಿದರೂ ಕಬಳಿಸುವುದಕ್ಕೆ ತಯಾರಿದ್ದೆವು. ಒಂದು ಕಡೆ ರಸ್ತೆ ಬದಿಯಲ್ಲಿ ಒಂದು ಹಲಸಿನ ಮರದಲ್ಲಿ ಹಣ್ಣುಗಳು ಕಾಣಸಿಕ್ಕಿದವು. ನಮ್ಮವರ ಪೈಕಿ ಒಬ್ಬರು ಮರ ಹತ್ತಿ 2-3 ಹಣ್ಣುಗಳನ್ನು ಕೆಳಗೆ ಉದುರಿಸಿಹಾಕಿದರು. ಅವುಗಳನ್ನು ಚಾಕುವಿನಿಂದ ಬಿಡಿಸಿ, ಅವು ಪೂರ್ತಿ ಹಣ್ಣಾಗಿಲ್ಲದಿದ್ದರೂ

ಎರಡೂ ಕೈಗಳನ್ನು ಉಪಯೋಗಿಸಿ ಗಬಗಬನೆ ತಿಂದೆವು. ನಾವು ತಿನ್ನುವ ಆ ದೃಶ್ಯವನ್ನು ಈಗಿನವರು ಯಾರಾದರೂ ನೋಡಿದರೆ, ನಾವು ಆದಿಮಾನವರೊ ಅಥವ ಹೋಮೋಸೇಪಿಯನ್ಸ್ ಬುಡಕಟ್ಟಿನವರೋ ಎಂಬ ಶಂಕೆ ಬರುವ ಸಂಭವವಿತ್ತು.

ಗೇರುಸೊಪ್ಪಾಕ್ಕೆ ತಲುಪುವುದಕ್ಕೆ ಇನ್ನೂ ದೂರವಿತ್ತು. ರಾತ್ರಿಯಾಗುವುದಕ್ಕೆ ಮೊದಲು ತಲುಪುವ ಸಂಭವವಿರಲಿಲ್ಲ. ನಿಬಿಡಾರಣ್ಯದಲ್ಲಿ ಹಾದು ಹೋಗುವ ರಸ್ತೆ, ಸಾಲದ್ದಕ್ಕೆ ಕತ್ತಲಾಗುತ್ತಾ ಬಂತು. ಈ ಸಮಯಕ್ಕೆ ಸರಿಯಾಗಿ ದಾರಿಯಲ್ಲಿ ಅರಣ್ಯ ಇಲಾಖೆಯವರ ಬಂಗ್ಲೆಯೊಂದು ಕಾಣಿಸಿಕ್ಕಿದ್ದರಿಂದ ರಾತ್ರಿ ಕಳೆಯಲು ಅಲ್ಲಿಯೇ ತಂಗಿದೆವು. ಬೆಳಗಾದ ಕೂಡಲೆ ಪಯಣ ಮುಂದುವರಿಸಿ ಒಂದೆರಡು ಗಂಟೆಗಳಲ್ಲಿಯೆ ಗೇರುಸೊಪ್ಪಾವನ್ನು ತಲುಪಿದೆವು. ತುಳುನಾಡು ಚರಿತ್ರೆಯ ಪರಕಾರ ಗೇರುಸೊಪ್ಪಾ ಒಂದು ದೊಡ್ಡ ಊರಾಗಿತ್ತು. ಅದು ಹಿಂದೆ ಆಳಿದ ನಾಯಕರ ರಾಜಧಾನಿಯಾಗಿತ್ತು. ಆದರೆ ನಮಗೆ ಊರು ಹೆಚ್ಚೇನೂ ಕಾಣಿಸಲಿಲ್ಲ. ನಾವು ನೇರ ಶರಾವತಿ ನದೀ ತೀರಕ್ಕೆ ಹೋಗಿ ಒಂದು ದೋಣಿ ಹತ್ತಿ ಹೊನ್ನಾವರವನ್ನು ಒಂದೆರಡು ತಾಸುಗಳಲ್ಲಿಯೇ ತಲುಪಿ ಅಲ್ಲಿ ಒಂದು ಹೋಟೇಲಿನಲ್ಲಿ ಇಳಕೊಂಡೆವು. ಬಹುಶಃ ಅದು ಕಾರಂತರ ಪರಿಚಯಸ್ತರ ಹೋಟೇಲಿರಬೇಕು. ಅಲ್ಲಿ ಆ ದಿನವೆಲ್ಲ ಇದ್ದು ವಿಶ್ರಾಂತಿ ಪಡೆದು ಮಾರನೆಯ ಬೆಳಿಗ್ಗೆ ಸ್ನಾನೋಪಹಾರಗಳನ್ನು ಮುಗಿಸಿ ಸಾಗರದತ್ತ ಸಾಗಿ ಸುಮಾರು 9-10 ಗಂಟೆಗೆ ಸಾಗರವನ್ನು ತಲುಪಿದೆವು. ಅಲ್ಲಿಯು ಸಹ ಕಾರಂತರ ಪರಿಚಯಸ್ತರ ಒಂದು ಹೋಟೇಲಿನಲ್ಲಿ ಇಳಕೊಂಡೆವು.

ನಾವು ಸಾಗರವನ್ನು ತಲುಪುವಾಗ ಬೇಸಿಗೆಯ ಸೆಕೆ ಬೇರೆ. ಹೋಟೇಲಿನಲ್ಲಿ ಇಳಿದುಕೊಂಡ ಕೂಡಲೇ ನಮಗೆ ಸಿಕ್ಕಿದ ಪಾನೀಯವೆಂದರೆ ಹೆಸರು ಕಾಳನ್ನು ಅರೆದು ಬೆಲ್ಲ ಮಿಶ್ರಣದ ಶರಬತ್ತು. ಅದನ್ನು ಕಂಠ ಪೂರ್ತಿ ಕುಡಿದದ್ದೇ, ಅಷ್ಟೊಂದು ಸ್ವಾದಿಷ್ಟವಾಗಿತ್ತು ಆ ಪಾನೀಯ. ನಡೆದುಬಂದ ಆಯಾಸವೆಲ್ಲ ಕ್ಷಣಾರ್ಧದಲ್ಲಿ ಪರಿಹಾರ, ಹೊಟೇಲಿನಲ್ಲಿ ನಮಗೆಲ್ಲ ಸರಿಯಾಗಿ ಆಹಾರ ವಿಶ್ರಾಂತಿಗಳೆರಡೂ ದೊರೆತವು. ಸಂಜೆಗೆ ಎರಡು ಬೀದಿಗಳು ಸೇರುವಲ್ಲಿ ತಾತ್ಕಾಲಿಕವಾಗಿ ಕಟ್ಟಲ್ಪಟ್ಟ ರಂಗ ಮಂಚದ ಮೇಲೆ ನಮ್ಮ ತಂಡ ಡುಮಿಂಗೋ ಎಂಬ ನಾಟಕವನ್ನು ಆಡಿ ತೋರಿಸಿ ಪ್ರೇಕ್ಷಕರ ಮೆಚ್ಚುಗೆಯನ್ನು ಪಡೆಯಿತು.

ಸಾಗರದಲ್ಲಿ ಅಥವಾ ಅದರ ಸುತ್ತ ಮುತ್ತಲಿನ ಪ್ರೇಕ್ಷಣೀಯ ಸ್ಥಳವೆಂದರೆ ಜೋಗು ಜಲಪಾತವೊಂದೆ. ಬೇರೆ ಯಾವ ಪ್ರೇಕ್ಷಣೀಯ ಸ್ಥಳಗಳೂ ಇಲ್ಲದ್ದರಿಂದ ಮಾರನೆಯ ದಿನ ಬೆಳಿಗ್ಗೆ ಸ್ನಾನ ಉಪಹಾರಗಳನ್ನು ಮುಗಿಸಿ ಬಸ್ಸು ಹತ್ತಿ ಕೋಟ ತಲುಪಿದೆವು. ಕೋಟದಲ್ಲಿಯೊ ಅಥವಾ ಬೈಂದೂರಿನಲ್ಲಿಯೊ ಸರಿಯಾಗಿ ನೆನಪಿಲ್ಲ ನಾವು ಸಮುದ್ರದ ಸ್ನಾನ ಮಾಡಿದೆವು. ಮನಸಾ ನೀರಲ್ಲಿ ಈಜಾಡಿ ಕಡಲ ಅಲೆಗಳೊಡನೆ ಚೆಲ್ಲಾಟವಾಡಿ ಸಮುದ್ರ ಸ್ನಾನ ಮಾಡಿ ಪುಣ್ಯ ಕಟ್ಟಿಕೊಂಡೆವು.

ನಾವು ಕೋಟದಲ್ಲಿ ಇಳಿದುಕೊಂಡದ್ದು ಕಾರಂತರ ಸ್ವಂತ ಮನೆಯೆ. ಅಂದು ಅಲ್ಲಿ ಅವರ ಕುಟುಂಬದವರ ಒಬ್ಬರದು ನೂರು ವರ್ಷದ (ಶತಾಬ್ದಿ)ಹುಟ್ಟು ಹಬ್ಬ. ಕಾರಂತರ ತಂದೆಯವರು ಅವರನ್ನು ನಮಗೆಲ್ಲ ಪರಿಚಯ ಮಾಡಿಸಿದರು. ಅವರೊಬ್ಬರು ಇಚ್ಛಾಮರಣಿಗಳಿರಬೇಕು. ನಮ್ಮ ತಂಡದವರನ್ನು ಬೇರೆಯೇ ಒಂದು ಕಡೆ ಊಟಕ್ಕೆ ಕೂತುಕೊಳಿಸಿದ್ದರು,. ಗಡದ್ದು ಪಾಯಸದ ಊಟ, ಹೊಟ್ಟೆ ತುಂಬಾಊಟ ಮಾಡಿದೆವು. ಒಂದು ತಿಂಗಳು ಆಹಾರ ಕಾಣದವರಂತೆ. ಇಷ್ಟೆಲ್ಲ ಆಗುವಾಗ, ಕಾರಂತರಿಗೆ ಜ್ವರ ಬಂದು ಹಾಸಿಗೆ ಹಿಡಿದು ಬಿಟ್ಟರು. ಬಹುಶಃ ನಮ್ಮನ್ನೆಲ್ಲಾ, ದಟ್ಟ

ಅರಣ್ಯಗಳ ಮಧ್ಯೆ ಕಾಡು ಮೇಡುಗಳಲ್ಲೆಲ್ಲಾ ಸುತ್ತಾಡಿಸಿ, ಯಾವ ಹೆಚ್ಚಿನ ಅವಘಡಗಳೂ ಇಲ್ಲದೆ, ಪ್ರೇಕ್ಷಣೀಯ ಸ್ಥಳಗಳನ್ನು ತೋರಿಸಿ ಹಿಂತಿರುಗಿ ನಮ್ಮನ್ನು ಕರೆತಂದು ದೊಡ್ಡ ಜವಾಬ್ದಾರಿಯನ್ನು ಅವರು ಹೊತ್ತಿದ್ದರಿಂದ ಅದು ಅವರನ್ನು ಹಾಸಿಗೆ ಹಿಡಿಯುವಂತೆ ಮಾಡಿರಲಿಕ್ಕೂ ಸಾಕು.

ಕಾರಂತರಿಗೂ ಅವರ ಕುಟುಂಬದವರಿಗೂ, ಭೋಜನವಾದ ಮೇಲೆ, ವಿದಾಯ ಹೇಳಿ ನಮ್ಮ ತಂಡದ ಸದಸ್ಯರು ಬಸ್ ಹತ್ತಿ ಚದುರಿ ನಮ್ಮ ನಮ್ಮ ಸ್ವಂತ ಊರುಗಳನ್ನು ಸೇರಿದೆವು.

ಶಿವರಾಮ ಕಾರಂತರು 1927 ಮತ್ತು 1929 ನೇ ಇಸವಿಯಲ್ಲಿ ಶಾಂತಿ ಶಿಬಿರಗಳನ್ನು ಏರ್ಪಡಿಸಿದ್ದರು. ಹಿಂದೆ ಹೇಳಿದಂತೆ, ನಾನು 1928ನೇ ಇಸವಿಯ ಶಿಬಿರದಲ್ಲಿ ಮಾತ್ರ ಪಾಲ್ಗೊಂಡಿದ್ದು, ಆದ್ದರಿಂದ ಇನ್ನೆರಡು ವರ್ಷಗಳ ಶಿಬಿರಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಕೊಡಲು ಅಸಮರ್ಥ. ಈ ಶಿಬಿರಗಳನ್ನು ಏರ್ಪಡಿಸುವುದಕ್ಕೆ ಪ್ರೋತ್ಸಾಹವಿತ್ತ ಮುಖ್ಯ ವ್ಯಕ್ತಿಗಳೆಂದರೆ; ಮೊಳಹಳ್ಳಿ ಶಿವರಾಯರು, ಪಡುಕೋಣೆ ರಮಾನಂದ ರಾಯರು, ಪಂಜೆ ಮಂಗೇಶ ರಾಯರು, ಕಾರ್ನಾಡು ಸದಾಶಿವ ರಾಯರು ಮತ್ತು ಇನ್ನೂ ಕೆಲವರು, ಮೊದಲನೆಯ ವರ್ಷದ ಶಾಂತಿ ಶಿಬಿರಕ್ಕೆ ಮಾಸ್ತಿವೆಂಕಟೇಶಯ್ಯಂಗಾರ್, ಮಂಜೇಶ್ವರ ಗೋವಿಂದ ಪೈ, ವಿ.ಸೀಯವರು ಆಹ್ವಾನಿಸಲ್ಪಟ್ಟು ಅವರು ಸಹ ಶಿಬಿರದಲ್ಲಿ ಪಾಲ್ಗೊಂಡಿದ್ದರೆಂದು ಶ್ರೀ ಕೆ.ಎಸ್. ಏರ್ಕಾಡಿತ್ತಾಯರಿಂದ ತಿಳಿದು ಬಂತು. ಯಾಕೆಂದರೆ ಅವರು ಮೂರು ಶಾಂತಿ ಶಿಬಿರಗಳಲ್ಲಿಯೂ ಪಾಲ್ಗೊಂಡಿದ್ದರು.

ಕಾರಂತರು ಕಳೆದ ಅಕ್ಟೋಬರ ತಿಂಗಳಲ್ಲಿ ತಮ್ಮ 90ನೇ ವಯಸ್ಸಿಗೆ ಪಾದಾರ್ಪಣೆ ಮಾಡಿದರೆಂಬ ಸಂಗತಿ ನಮ್ಮ ವಾಚಕರನೇಕರಗೆ ತಿಳಿದ ವಿಷಯ. ಈ ಲೆಕ್ಕಾಚಾರ ಮೇಲಿನಿಂದ ಶಿಬಿರಗಳನ್ನು ನಡೆಸುವಾಗ ಅವರ ಪ್ರಾಯ ಕೇವಲ 25-26 ವರ್ಷಗಳಷ್ಟೇ. ಇಷ್ಟು ಎಳೇ ಪ್ರಾಯದಲ್ಲೇ ಕಾರಂತರು ಅನೇಕ ಕನ್ನಡ ಸಾಹಿತ್ಯದ ದಿಗ್ಗಜಗಳ ಸ್ನೇಹ ಸಂಪರ್ಕಗಳನ್ನು ಬೆಳೆಸಿಕೊಂಡದ್ದು ನೋಡಿದರೆ ಅವರ ವರ್ಚಸ್ಸು ಆಗಲೇ ಎಷ್ಟರ ಮಟ್ಟಿಗೆ ಬೆಳೆದಿತ್ತೆಂದು ವಾಚಕರಿಗೆ ವ್ಯಕ್ತವಾಗಬಹುದು. ಸಾಮಾನ್ಯ ಇದೇ ವಯಸ್ಸಿನಲ್ಲೇ "ವಸಂತ" ವೆಂಬ ಮಾಸ ಪತ್ರಿಕೆಯನ್ನು ನಡೆಸುತ್ತಿದ್ದರು. ಮತ್ತು" ವಿಚಿತ್ರ ಕೂಟ", "ದೇವದೂತರು" ಎಂಬಿತ್ಯಾದಿ ಕೆಲವು ಕಾದಂಬರಿಗಳನ್ನು ಸಹ ಬರೆದಿದ್ದರು. ಈ ಪ್ರಾಯದ ಸ್ವಲ್ಪ ಅಂತರದಲ್ಲಿಯೀ, ಹರ್ಷ ಪ್ರಿಂಟಿಂಗ್ ಪ್ರೆಸ್, ಸಿನಿಮಾ ತಯಾರಿಕೆ ಇತ್ಯಾದಿ ಕಾರ್ಯಗಳಿಗೂ ಕೈ ಹಾಕಿದ್ದರು. ಬಾಲವನ ಎಂಬ ಸಂಸ್ಥೆ -ಅವರ ಮೆದುಳಿನ ಶಿಶು - ಸ್ಥಾಪನೆಯಾಗಿದ್ದು ಸಾಮಾನ್ಯ ಈ ವಯಸ್ಸಿನಲ್ಲೇ ಆಗಿತ್ತು.

ಕಾರಂತರು ಪ್ರಕೃತಿ ಸೌಂದರ್ಯದ ಉಪಾಸಕರು. ಸುಂದರ ಪ್ರೇಕ್ಷಣೀಯ ತಾನಗಳನ್ನು ತಾವು ಮಾತ್ರ ನೋಡಿ ತೃಪ್ತರಾಗದೆ ಇತರರೂ ನೋಡಿ ಆನಂದಿಸಲಿ ಎಂಬ ಇರಾದೆಯಿಂದಲೇ ಇಂತಹ ಶಿಬಿರಗಳನ್ನು ಏರ್ಪಡಿಸಿದ್ದು. ಅರಣ್ಯ ನಾಶ, ಪರಿಸರ ಮಾಲಿನ್ಯ ಇತ್ಯಾದಿಗಳು ಅವರ ಸ್ವಭಾವಕ್ಕೆ ವಿರೋಧ. ಆದ್ದರಿಂದಲೇ ಕೈಗಾ ಅಣು ಸ್ಥಾವರದ ಯೋಜನೆಯನ್ನು ಅವರು ತೀವ್ರವಾಗಿ ವಿರೋಧಿಸಿದ್ದು ಅದರಲ್ಲಿ ಸೋಜಿಗವೇನೂ ಇಲ್ಲ. ಅದು ತಪ್ಪೋ ಒಪ್ಪೋ ಎಂಬ ಸಂಗತಿ ಬೇರೆ.

ಕಾರಂತರು, ಕಂದಾಚಾರ, ಮೂಢ ನಂಬಿಕೆ, ಗೊಡ್ಡು ಸಂಪ್ರದಾಯಗಳ ವಿರೋಧಿ, ಹಾಗಾಗಿಯೇ ಅಸ್ಪೃಶ್ಯತಾ ನಿವಾರಣೆಯಂತಹ ಚಳವಳಿಯಲ್ಲಿ ಅವರಿಗಿದ್ದ ಸಹಾನುಭೂತಿ, ಪತಿತರ ಮೇಲೆ ಅವರಿಗಿದ್ದ ಅನುಕಂಪ, ಅವರು ಬರೆದ ಕೃತಿಗಳಿಂದ ನಿಚ್ಚಳವಾಗಿ ಕಾಣುತ್ತದೆ. ಇನ್ನು ಒಂದು ಮುಖ್ಯ ಪ್ರಶ್ನೆ ಕೆಲವರ ಮನಸ್ಸಿನಲ್ಲಿ ಉದ್ಭವಿಸಬಹುದು. ಯಾವುದೆಂದರೆ ಅವರು ನಾಸ್ತಿಕರೋ ಯಾ ಆಸ್ತಿಕರೋ ಎಂದು. ನಾವು ಅಮವಾಸ್ಯೆ ಬೈಲಿನಲ್ಲಿರುವಾಗ ಬೆಳಿಗ್ಗೆ ಎದ್ದ ಕೂಡಲೆ ಸಾಮೂಹಿಕ ಪ್ರಾರ್ಥನೆ ಮಾಡುತ್ತಿದ್ದೆವು ಎಂತ ನಾನು ಹಿಂದೆ ಹೇಳಿದ್ದೆ. ಹಾಗಿರುವಾಗ, ಅವರಿಗೆ ಆ ವಯಸ್ಸಿನಲ್ಲಿ ದೈವ ಭಕ್ತಿ, ನಂಬಿಕೆ ಇದ್ದಂತಾಯಿತು. ಆದರೆ ಕಾರಂತರ “ ಮೂಕಜ್ಜಿಯ ಕನಸುಗಳು” ಈ ಕೃತಿಯನ್ನು ಓದುವಾಗ, ಯಾವ ಕಾರಂತರು ಇದನ್ನು ಬರೆದದ್ದು ಎಂಬ ಶಂಕೆ ಕೆಲವರಿಗೆ ಬರಬಹುದು. ಇದರ ವಿಶ್ಲೇಷಣೆ ಏನಿರಬಹುದೆಂದರೆ, ಯುವ ವಯಸ್ಸಿನಲ್ಲಿ ಹೆಚ್ಚಿನವರು ಭಾವನಾಶೀಲರಾಗಿರುತ್ತೇವೆ. ನಮ್ಮ ಎಲ್ಲ ನಂಬಿಕೆಗಳನ್ನೂ ವಿಶ್ವಾಸಗಳನ್ನೂ ಹಳೆ ಅಭಿಪ್ರಾಯಗಳನ್ನೂ ಪ್ರಶ್ನಿಸತೊಡಗುತ್ತೇವೆ. ಮತ್ತು ನಮ್ಮ ಸ್ವಂತ ಅನುಭವದ ಒರೆಗಲ್ಲಿಗೆ ಹಚ್ಚಿ ಪರೀಕ್ಷಿಸಲು ತೊಡಗುತ್ತೇವೆ. ಕಾರಂತರಲ್ಲಿಯೂ ಇದೇ ಮಾರ್ಪಾಡು ಆಗಿರಬಹುದೇ ? ಅವರು ನಾಸ್ತಿಕರೂ ಅಲ್ಲ ಆಸ್ತಿಕರೂ ಅಲ್ಲ ಎಂಬ ಅಭಿಪ್ರಾಯವನ್ನು ತಾಳಬಹುದು. ಇನ್ನೂ ಹಲವು ವಿಷಯಗಳಲ್ಲಿ ಅವರು ಬದಲಾಯಿಸಿರುವಂತೆ ತೋರುತ್ತದೆ.

ಅವರು ಶೀಘ್ರ ಕೋಪಿಗಳೆಂಬ ಆರೋಪಣೆಯೂ ಇದೆ. ಅದರಂತೆಯೇ ಕೆಲವು ಸಾಹಿತಿಗಳ ಮೇಲೆ ಅವರಿಗೆ ಸದಭಿಪ್ರಾಯವಿಲ್ಲವೆಂಬ ಮಾತೂ ಕೇಳಿ ಬರುತ್ತದೆ. ನಮ್ಮ ಒಂದು ತಿಂಗಳ ಶಾಂತಿ ಶಿಬಿರದ ಅವಧಿಯಲ್ಲಿ, ಅವರು ಕೋಪಗೊಂಡದ್ದು ನನಗೆ ನೆನಪಾಗುವುದಿಲ್ಲ. ನಮ್ಮವರ ಪೈಕಿ ಯಾರಾದರೂ ಅಪ್ಪಿ ತಪ್ಪಿದರೆ, “ ಹೇ ಭೋಪ, ಹೇ ಬಬ್ಬು” ಎಂದು ಸಂಭೋಧಿಸಿ ಸ್ವಲ್ಪದರಲ್ಲಿಯೆ ಸರಿಪಡಿಸುತ್ತಿದ್ದರು.

ನಾನು ಸಣ್ಣ ವಯಸ್ಸಿನಲ್ಲಿ ಕಾರಂತರ ಚಟುವಟಿಕೆಗಳನ್ನು ಗಮನಿಸಿ ಅವುಗಳನ್ನು ಈಗ ಮೆಲಕು ಹಾಕುವಾಗ, ನನಗಾಗುವ ಅನಿಸಿಕೆಗಳನ್ನು ಮಾತ್ರ ಲೇಖನದಲ್ಲಿ ಬರೆಯಲು ಸಾಹಸ ಪಟ್ಟಿದ್ದೇನೆ. ಕಾರಂತರ ಅದಮ್ಯ ಉತ್ಸಾಹ, ಕಾರಂಜಿಯಂತೆ ಪುಟಿದೇಳುವ ಛಲ ಇವುಗಳನ್ನು ಯೋಚಿಸುವಾಗ ಅವರನ್ನು ಏಕಲವ್ಯನ ಸಾಲಿಗೆ ಸೇರಿಸಬಹುದು ಎಂದು ನನಗನಿಸುತ್ತದೆ. ಅವರ ಬಹುಮುಖ ಪ್ರತಿಭೆ, ಜ್ಞಾನ ಮತ್ತು ಚಟುವಟಿಕೆ ಅವರ ಮನಸ್ಸಿನ ಅಗಾಧತೆಯನ್ನು ತೋರಿಸುತ್ತದೆ. ಹಾಗೂ ಈ ಗುಣಗಳ ಫಲವಾಗಿ ಸಾಹಿತ್ಯದಲ್ಲಿ ಅವರು ಉತ್ತುಂಗ ಶಿಖರವನ್ನೇರಿದರು. ದೇವರು ಅವರಿಗೆ ದೀರ್ಘಾಯುರಾರೋಗ್ಯ ಕೊಡಲಿ ಎಂದು ಹಾರೈಸಿ ಈ ಬರಹವನ್ನು ಮುಕ್ತಾಯಗೊಳಿಸುತ್ತೇನೆ.

(ಮುಂಬಯಿಯ ಬಿ.ಎಸ್.ಕೆ.ಬಿ. ಎಸೋಸಿಯೇಶನ್ ಅವರು ನಡೆಸುತ್ತಾ ಬರುತ್ತಿರುವ ಮಾಸಿಕ ಗೃಹ ಪತ್ರಿಕೆ 'ಗೋಕುಲವಾಣಿ' ಯಲ್ಲಿ ಪ್ರಕಟವಾದ ಈ ಲೇಖನ ದಿ. ಎಸ್. ವಿ. ಎಸ್. ರಾವ್ ರವರ 'ಕಾಡು ಗುಲಾಬಿ' ಎಂಬ ಅವರ ಸಮಗ್ರ ಲೇಖನಗಳ ಕೃತಿಯಲ್ಲಿ ಮರು ಪ್ರಕಟವಾಗಿದೆ. ಈ ಲೇಖನದ ಮರು ಪ್ರಕಟನೆಗೆ ಅನುಮತಿ ಇತ್ತುದಕ್ಕಾಗಿ ನಾವು ಲೇಖಕರ ಪುತ್ರ ವಸಂತ ರಾವ್ ಅವರಿಗೆ ಕೃತಜ್ಞರು -ಸಂ)

# ಶ್ರದ್ಧಾಂಜಲಿ

**ಶಂಭು ಹೆಗಡೆ ಕೆರೆಮನೆ**

ಯಕ್ಷರಂಗದ ಅಭಿಜಾತ ಕಲಾವಿದ, ಜಾನಪದ ಹಾಗೂ ಯಕ್ಷಗಾನ ಅಕಾಡೆಮಿಯ ಮಾಜಿ ಅಧ್ಯಕ್ಷ ಶಂಭು ಹೆಗಡೆ ಕೆರೆಮನೆ (71) ಮಂಗಳವಾರ ನಸುಕಿನಲ್ಲಿ ಇಡಗುಂಜಿಯಲ್ಲಿನ ರಂಗಸ್ಥಳದಲ್ಲೇ ಹೃದಯಾಘಾತದಿಂದ ವೀರಮರಣ ಹೊಂದಿದರು.

ತಮ್ಮ ಆರಾಧ್ಯ ದೈವ ವಿನಾಯಕನ ಸನ್ನಿಧಿಯ ಎದುರು ರಥಸಪ್ತಮಿಯ ದಿನ ಇಷ್ಟವಾದ ರಾಮನ ಪಾತ್ರ ನಿರ್ವಹಿಸಿ ಸಾವಿರಾರು ಜನರನ್ನು ರಂಜಿಸುತ್ತಲೇ ಬಣ್ಣ ಬಳಿದುಕೊಂಡು ಗೆಜ್ಜೆ ಕಟ್ಟಿಕೊಂಡು ಕಣ್ಮುಚ್ಚಿದರು. ಅಕ್ಷರಶಃ ಕೊನೆಯುಸಿರಿರುವರೆಗೆ ಯಕ್ಷಗಾನಕ್ಕೆ ಸೇವೆ ಸಲ್ಲಿಸಿದರು. ಅವರಿಗೆ ಪತ್ನಿ ಗೌರಿ, ಪುತ್ರ ಶಿವಾನಂದ, ಪುತ್ರಿ ಶಾರದಾ, ಸೊಸೆ ರಾಜೇಶ್ವರಿ, ಅಪಾರ ಅಭಿಮಾನಿಗಳಿದ್ದಾರೆ.

ತಂದೆ ಶಿವರಾಮ ಹೆಗಡೆ ಕೆರೆಮನೆಯವರಿಂದ ಬಳುವಳಿಯಾಗಿ ಬಂದ ಯಕ್ಷಗಾನ ಕಲಾಸಂಪತ್ತನ್ನು ಸಮರ್ಥವಾಗಿ ಬಳಸಿಕೊಂಡರು. ಯಕ್ಷಗಾನ ಕಲಾ ತರಬೇತಿ ಕೇಂದ್ರದ ಸಾರಥ್ಯ ವಹಿಸಿ, ತಂದೆ ಶಿವರಾಮ ಹೆಗಡೆಯವರ ಹೆಸರಿನಲ್ಲಿ ಗಮನ ಸೆಳೆಯುವ ರಂಗಮಂದಿರ ನಿರ್ಮಿಸಿ, ರಾಜ್ಯ ಯಕ್ಷಗಾನ ಜಾನಪದ ಅಕಾಡಮಿಯ ಅಧ್ಯಕ್ಷರಾಗಿ ತೆರೆಮರೆಯಲ್ಲಿರುವ ಪ್ರತಿಭಾನ್ವಿತ ಕಲಾವಿದರನ್ನು ಗುರುತಿಸಿ ಅಕಾಡೆಮಿ ಪ್ರಶಸ್ತಿಗಳನ್ನು ನೀಡಿ ಅವರನ್ನು ಬೆಳಕಿಗೆ ತಂದು ಪ್ರೋತ್ಸಾಹಿಸಿದರು. ಶಿವರಾಮ ಹೆಗಡೆಯವರ ಹೆಸರಿನಲ್ಲಿ ನಾಡಿನ ಕಲಾವಿದರನ್ನು ಕರೆತಂದು ಸನ್ಮಾನಿಸಿ ಕಲಾಲೋಕಕ್ಕೆ ಮಾದರಿಯಾಗಿ ನಿಂತವರು.

ಆರಂಭದಲ್ಲಿ ನಾಟಕ ಪಾತ್ರಗಳನ್ನೂ ನಿರ್ವಹಿಸಿದ್ದ ಅವರು 'ಪರ್ವ' ಚಿತ್ರದಲ್ಲಿ ನಟಿಸಿದ ಪೋಷಕ ಪಾತ್ರಕ್ಕೆ ಪ್ರಶಸ್ತಿಯನ್ನೂ ಪಡೆದಿದ್ದರು. ಶಿವರಾಮ ಹೆಗಡೆಯವರ ಹಿರಿಯ ಮಗನಾಗಿ 1938ರಲ್ಲಿ ಜನಿಸಿದ ಶಂಭು ಹೆಗಡೆ ವಿವಿಧ ವೃತ್ತಿ ಮೇಳಗಳಲ್ಲಿ ತೊಡಗಿಕೊಂಡು ತಮ್ಮದೇ ಆದ ಛಾಪು ಮೂಡಿಸಿದ್ದರು. ಅವರಿಗೆ ಸಂದ ಸಂಘ-ಸಂಸ್ಥೆಗಳ ಅಸಂಖ್ಯ ಸನ್ಮಾನ ಗೌರವಗಳು ವಿರಳಶ್ರೇಣಿಯ ಪ್ರತಿಭೆಗೆ ಸಿಕ್ಕ ಪ್ರತೀಕವಾಗಿದೆ. ಅವರ ನಿಧನದಿಂದ ಬಡಗುತಿಟ್ಟಿನ ಯಕ್ಷಗಾನ ರಂಗಭೂಮಿಯ ಪ್ರಖರ ಬೆಳಕೊಂದು ಆರಿದಂತಾಗಿದೆ.

ಮಂಗಳವಾರ ನಸುಕಿನ ವೇಳೆ ತಮಗೆ ಬಹು ಆಪ್ತವಾದ 'ಸೀತಾ ವಿಯೋಗ' ಪ್ರಸಂಗದಲ್ಲಿ ರಾಮನ ಪಾತ್ರದ ವೇಷ ತೊಟ್ಟು ಶಂಭು ಹೆಗಡೆ ಅತ್ಯುತ್ಸಾಹದಿಂದ ನರ್ತನ, ವಾಕ್ಚಾತುರ್ಯ ಪ್ರದರ್ಶಿಸುತ್ತಿದ್ದರು. ಪ್ರಸಂಗದ ಅಂತಿಮ ಹಂತದಲ್ಲಿ ನೆಬ್ಬೂರು ನಾರಾಯಣ ಭಾಗವತರು 'ಏಳಿ ಪೋಗುವ ನಾವು ಮುನಿಪನಿದ್ದೆಡೆಗೆ' ಎಂದು ಹಾಡು ಹೇಳುತ್ತಿದ್ದಂತೆ ಶಂಭು ಹೆಗಡೆ ಅವರಿಗೆ ಎದೆ ನೋವು ಕಾಣಿಸಿಕೊಂಡಿದೆ. ಆದರೂ ಹಾಡು ಮುಗಿದ ಮೇಲೆ 'ಏಳಿ ಹೋಗೋಣ ಏಳಿ ಹೋಗೋಣ' ಎಂದು ಹೇಳಿದ್ದಾರೆ. ನೆಬ್ಬೂರು ಭಾಗವತರತ್ತ ತಿರುಗಿ 'ನನ್ನ ಹತ್ರ ಇನ್ನು ಆಗ್ತಿಲ್ಲೆ, ನೀವು ಮುಗಿಸಿ' ಎಂದವರೇ ಚೌಕಿಯತ್ತ ಹೆಜ್ಜೆ ಹಾಕಿದವರು ಕಿರೀಟ ತೆಗೆದಿಟ್ಟು ಎದೆ ಹಿಡಿದು ಮಲಗಿದರು. ಅಷ್ಟರಲ್ಲಿ ಮಗ ಶಿವಾನಂದ ಹೆಗಡೆ ಆಸ್ಪತ್ರೆಗೆ ಕರೆದೊಯ್ದುರಾದರೂ ಆ ವೇಳೆಗಾಗಲೇ ರಾಮನ ಪಾತ್ರದಲ್ಲಿದ್ದ ಶಂಭು ಹೆಗಡೆ ಪರಂಧಾಮರಾಗಿದ್ದರು. ಬಣ್ಣ ಹಚ್ಚಿಕೊಂಡೇ ಬಣ್ಣದ ಬದುಕಿಗೆ ವಿದಾಯ ಹೇಳಿದರು.

# ಕನ್ನಡ ಸಾಹಿತ್ಯಕ್ಕೆ ಕೃಷ್ಣಶಾಸ್ತ್ರಿಗಳ

1953 : ಭಾಸಕವಿ (ಪ್ರಾಚೀನ ಸಂಸ್ಕೃತ ನಾಟಕ ಕರ್ತ ಭಾಸಕವಿಯ ಬಗ್ಗೆ ಕವಿ ವಿಚಾರ ಮತ್ತು ಕಾವ್ಯ ವಿಮರ್ಶೆ)

1960 : ನಿರ್ಮಲ ಭಾರತೀ ಅಥವಾ ಮಕ್ಕಳ ಮಹಾಭಾರತ (ತಮ್ಮ ಮತ್ತೊಂದು ಮಹಾರಚನೆ 'ವಚನಭಾರತ' ವನ್ನ ಆಧಾರವಾಗಿಟ್ಟುಕೊಂಡು ಚಿಕ್ಕಮಕ್ಕಳಿಗಾಗಿಯೇ ರಚಿಸಿದ ಸಂಕ್ಷಿಪ್ತ ಮಹಾಭಾರತ)

1948 : ಶ್ರೀಪತಿಯ ಕಥೆಗಳು (ಪ್ರಥಮವಾಗಿ ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾದ 12 ಸಣ್ಣಕಥೆಗಳ ಸಂಕಲನ)

1950 : ವಚನ ಭಾರತ (ಕೃಷ್ಣಶಾಸ್ತ್ರಿಗಳ ಮೇರು ಕೃತಿ: ಗದ್ಯ ರೂಪದಲ್ಲಿ ಹದಿನೆಂಟು ಪರ್ವಗಳ ಕಥಾ ವಿವರಗಳನ್ನೊಳಗೊಂಡ ಅಮೂಲ್ಯ ಗ್ರಂಥ)

1960 : ಕಥಾಮೃತ (ಸಂಸ್ಕೃತದಲ್ಲಿರುವ ಸೋಮದೇವನ ಬೃಹತ್ ಪದ್ಯ ಕಾವ್ಯ 'ಕಥಾಸರಿತ್ಸಾಗರ'ದ ಕನ್ನಡದ ಸಂಗ್ರಹ)

1955 : ಗದಾಯುದ್ಧ ನಾಟಕ ಮತ್ತು ಅದರ ನಾಯಕ (ಉಪನ್ಯಾಸ)

1960 : ಬಂಕಿಮಚಂದ್ರ (ಖ್ಯಾತ ಬಂಗಾಲಿ ಕಾದಂಬರಿಕಾರ ಬಂಕಿಮ ಚಂದ್ರ ಚಟರ್ಜಿಯವರ ಜೀವನ ಚರಿತ್ರೆ ಕೃತಿ ವಿಮರ್ಶೆ; ಕೇಂದ್ರ ಸಾಹಿತ್ಯ ಅಕಾಡೆಮಿಯ ಪುರಸ್ಕೃತ ಕೃತಿ)

1960 : ಭಾಷಣಗಳು ಮತ್ತು ಲೇಖನಗಳು (ಶಾಸ್ತ್ರಿಗಳ ಲೇಖನಗಳು, ಭಾಷಣಗಳು, ಕೆಲವು ವಿಮರ್ಶೆಗಳು ಹಾಗೂ ಸಂಪಾದಕೀಯ ಬರಹಗಳು)

1923 : ಸ್ವಾಮಿ ಶಿಷ್ಯ ಸಂವಾದ (ಬಂಗಾಲಿಯಿಂದ ಅನುವಾದ; ಸ್ವಾಮಿ ವಿವೇಕಾನಂದರ ಸಂಭಾಷಣೆಗಳು, ಈಗ "ಸ್ವಾಮಿ ವಿವೇಕಾನಂದರ ಸಂಭಾಷಣೆಗಳು" ಎಂಬ ಹೊಸ ಹೆಸರಿನಲ್ಲಿ ಶ್ರೀರಾಮಕೃಷ್ಣ ಆಶ್ರಮ, ಮೈಸೂರು ಅವರು ಹೊರತಂದಿದ್ದಾರೆ. ಇಲ್ಲಿ ಕಾಣಬರುವ ಹೊರಕವಚ ಚಿತ್ರ ಈ ಪುಸ್ತಕದ್ದು)








# ಕೊಡುಗೆ

1937 : ನಾಗಮಹಾಶಯ (ಬಂಗಾಲಿಯಿಂದ ಅನುವಾದ; ಮೂಲ ಶರಶ್ಚಂದ್ರ ಚಟರ್ಜಿ)

1963 : ರವೀಂದ್ರನಾಥ ಠಾಕೂರ್ ನಿಬಂಧಮಾಲಾ ಭಾಗ ೨ (ಬಂಗಾಲಿಯಿಂದ ಅನುವಾದ)

1952 : ಈಶ್ವರಕವಿ ವಿರಚಿತಂ, ಕವಿಜಿಹ್ವಾಬಂಧನಂ, (ಸಂಪಾದಕೀಯ)

1919 : ಶ್ರೀರಾಮಕೃಷ್ಣ ಪರಮಹಂಸರ ಚರಿತ್ರೆ (ಶ್ರೀ ಟಿ.ಎಸ್. ವೆಂಕಣ್ಣಯ್ಯನವರೊಡನೆ ಬರೆದದ್ದು)

1931 : ಹರಿಶ್ಚಂದ್ರಕಾವ್ಯ ಸಂಗ್ರಹ (ಶ್ರೀ ಟಿ.ಎಸ್. ವೆಂಕಣ್ಣಯ್ಯ ನವ ರೊಡನೆಬರೆದದ್ದು – ಕವಿ,ಕಾಲ, ಕಾವ್ಯಗಳು)




















ಕೊಡು

1937 : ನಾಗಮಹ
(ಬಂಗಾಲಿ
ಅನುವಾದ
ಶರಶ್ಚಂದ್ರ
1963 : ರವೀಂದ್ರ
ನಿಬಂಧಮ
(ಬಂಗಾಲಿ
ಅನುವಾದ
1952 : ಈಶ್ವರಕ
ಕವಿಜಿಜ್ಞಾ
(ಸಂಪಾದ
1919 : ಶ್ರೀರಾಮ
ಪರಮಹಂ
(ಶ್ರೀ ಟಿ.
ವೆಂಕಣ್ಣ
ಬರೆದದ್ದು
1931 : ಹರಿಶ್ಚಂದ್ರ
ಸಂಗ್ರಹ (
ವೆಂಕಣ್ಣ
ರೊಡನೆಬ
ಕವಿ,ಕಾಲ,



"ಏನಾದರೂ ಒಂದು ದುರದೃಷ್ಟದಿಂದ ಅ
ದುರುದೃಷ್ಟ ಬರದಿರಲಿ - ನಮ್ಮ ದೇಶದಲ್ಲಿ ವೆ
ಧರ್ಮ ಖಿಲವಾಗಿ ನಷ್ಟವಾಗಿ ಹೋದಂತೆ ಸಂಸ್ಕೃತ
ಆಗಿ ಹೋಗುವುದಾದರೆ, ಅದು ಹೊರದೇಶಗಳ
ಬದುಕಿರುತ್ತದೆ. ಆದರೆ ಕನ್ನಡ ? ಕನ್ನಡಿಗರೇ,
ಕನ್ನಡವನ್ನು ಇಂಡಿಯಾದೇಶದ ದಕ್ಷಿಣ ಭಾಗದಲ್ಲಿ ಒಂ
ಅಂಗೈ ಅಗಲ ಬಿಟ್ಟರೆ, ಮತ್ತೆಲ್ಲಿಯೂ ನೋಡಲಾ
ನೀವು ಅದನ್ನು ಅಲಕ್ಷ್ಯ ಮಾಡಿದರೆ ಯಾವ ದೇಶ
ಯಾವ ಜನರು ಅದನ್ನು ಎತ್ತಿ ಹಿಡಿಯಲಾರರು. ಅ
ಹೋದರೆ ಹೋಗಲಿ ಎನ್ನುವ ಹಾಗಿದ್ದರೆ, ಈ ಕ
ಬಂಗಾಳಕೊಲ್ಲಿ ಇದೆ. ಆ ಕಡೆ ಅರಬ್ಬಿ ಸಮುದ್ರ ಇ
ಗುಡಿಸಿ ಹಾಕಿಬಿಡಿ. ಇತರ ಭಾಷೆಗಳು ಒತ್ತಿಕೊಂ
ಬರಲಿ, ಆಕ್ರಮಿಸಿಕೊಳ್ಳಲಿ"!

– ಕೃಷ್ಣ ಶಾಸ್ತ್ರಿಗಳು, ಹೈದರಾಬಾದ್ 1941 ಕನ್ನ
ಸಾಹಿತ್ಯ ಸಮ್ಮೇಳನ ಅಧ್ಯಕ್ಷ ಭಾಷಣದ



ಅಂಬಳೆ ರಾಮಕೃಷ್ಣಶಾಸ್ತ್ರಿಗಳು



ಶಾಸ್ತ್ರಿಗಳು ಹುಟ್ಟಿದ ಮನೆ, ಅಂಬಳೆ ಗ್ರಾಮದಲ್ಲಿ



ಶಾಸ್ತ್ರಿಗಳು ಧರ್ಮಪತ್ನಿ
ಶ್ರೀಮತಿ ವೆಂಕಟಲಕ್ಷ್ಮನವರೊಡನೆ

## ಕುಗ್ರಾಮ ಅಂಬಳೆಯಿಂದ
## ಮೂಡಿ ಬಂದ ಕನ್ನಡ ಸೇನಾನಿ

ಚಿಕ್ಕಮಗಳೂರಿನ ಬದಿಯಲ್ಲಿರುವ ಅಂಬ
ಗ್ರಾಮದಲ್ಲಿ ಹುಟ್ಟಿದ ಶಾಸ್ತ್ರಿಗಳಿಗೆ ಪಿತ್ರಾರ್ಜಿತವಾ
ದಕ್ಕಿದ್ದು : ತಂದೆಯವರಿಂದ ಇಳಿದು ಬಂದ ಪಾಂಡಿತ
ಶಕ್ತಿ. ಬಡತನವಿದ್ದು, ಚಿಕ್ಕಂದಿನಲ್ಲೇ ಮಾತೃ
ವಿಯೋಗವಾದರೂ, ತಂದೆ ಅಂಬಳೆ ರಾಮಕೃ
ಶಾಸ್ತ್ರಿಗಳ ಆರೈಕೆ ಹಾಗೂ ಮನೆ ಪಾಠಗಳ ನಂತರ
ಶಾಲಾ-ಕಾಲೇಜು ಮೆಟ್ಟಲುಗಳನ್ನು ಹತ್ತಿ, ಕನ್ನಡ
ಸಂಸ್ಕೃತ, ಬಂಗಾಳಿ, ಇಂಗ್ಲೀಷ್ ಮತ್ತಿತ್ತರ ಭಾಷೆಗ
ಪಾಂಡಿತ್ಯ ಪಡೆದು ನಾಡು-ನುಡಿಗೆ, ಕನ್ನಡ
ಅಭ್ಯುದಯಕ್ಕೆ ನಾನಾ ರೀತಿಯಲ್ಲಿ ಹೋರಾಡಿ, ತಮ
ಜೀವನವನ್ನು ಸಾರ್ಥಕಪಡಿಸಿಕೊಂಡರು. ಹೀಗಾ
ಕೃಷ್ಣಶಾಸ್ತ್ರಿಗಳು ಇಂದು ಕನ್ನಡಿಗರ ಹೃದಯಗಳ
ಚಿರಸ್ಮರಣೀಯ ವ್ಯಕ್ತಿಯಾಗಿ ಉಳಿದಿದ್ದಾರೆ.


UNIVERSITY OF MYSORE

CITATION

BY

THE VICE-CHANCELLOR

Convocation

DOCTOR OF LAWS (Honoris Causa)

ON

SRI P. VENKATARAMANA RAO,
SRI N. MADHAVA RAU,
SRI K. C. REDDY

DOCTOR OF LETTERS (Honoris Causa)

ON

PROFESSOR A. R. KRISHNA SASTRI

ಮೈಸೂರು ವಿಶ್ವವಿದ್ಯಾನಿಲಯದ
ಡಿ-ಲಿಟ್ ಪ್ರಶಸ್ತಿ ಪತ್ರ



ಡಿ.ಲಿಟ್ ಪ್ರಶಸ್ತಿ ಸಮಾರಂಭದಲ್ಲಿ
ಕೃಷ್ಣಶಾಸ್ತ್ರಿಗಳು




ಮಿತ್ರರೂ, ಶಿಷ್ಯರೂ ಅರ್ಪಿಸಿದ
ಪ್ರಬಂಧಗಳಂಪುಟ ಅಭಿನಂದನೆ.

## ಗೌರವ ಪ್ರಶಸ್ತಿಗಳು ಅಭಿವಂದನೆಗಳು

ಷ್ಣಶಾಸ್ತ್ರಿಗಳು ಎಂದೂ ಪ್ರಶಸ್ತಿ ಗೌರವಗಳಿಗೆ ಸುಲಭವಾಗಿ ಒಪ್ಪಿದವರೇ ಅಲ್ಲ. ಎಲೆ ಮರೆಯ ಕಾಯಿಯಂತೆ ಕನ್ನಡ ಅಭ್ಯುದಯಕ್ಕೆ ದುಡಿದ ಸ್ತ್ರಿಗಳು ತಮ್ಮೆಲ್ಲಾ ಕಾರ್ಯಗಳಿಗೂ ತಮ್ಮ ಶಿಷ್ಯವೃಂದವನ್ನೇ ಮುಂದಿಟ್ಟುಕೊಂಡು ಹಿನ್ನೆಲೆಯಲ್ಲಿ ದುಡಿಯುವುದು ಇಂದಿಗೂ ಅವರ ಷ್ಯಕೋಟಿ ಸ್ಮರಿಸುತ್ತದೆ. ಆದರೂ ಅವರ ಅಭಿಮಾನಿಗಳ ಹಾಗೂ ಶಿಷ್ಯವೃಂದದ ಮಮತೆಯ ಒತ್ತಡದಿಂದಾಗಿ ಕೃಷ್ಣಶಾಸ್ತ್ರಿಗಳು ಕೆಲವು ರವ ಸನ್ಮಾನಗಳಿಗೆ ಒಪ್ಪಿಗೆ ಕೊಡಲೇಬೇಕಾಯಿತು.

ದರಾಬಾದಿನಲ್ಲಿ ನಡೆದ 26ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಕೃಷ್ಣಶಾಸ್ತ್ರಿಗಳದ್ದಾಗಿತ್ತು. ನಂತರ 1956ರಲ್ಲಿ ಅವರ ಮಿತ್ರರು, ಷ್ಯರು, ಒಪ್ಪಿಸಿದ ಪ್ರಬಂಧಗಳ ಸಂಪುಟ "ಅಭಿವಂದನೆ"ಯನ್ನು ಮೈಸೂರಿನಲ್ಲಿ ಶಾಸ್ತ್ರಿಗಳು ಸಂತೋಷದಿಂದ ಸ್ವೀಕರಿಸಿದರು. 1960 ರಲ್ಲಿ ಸೂರು ವಿಶ್ವವಿದ್ಯಾನಿಲಯ ಪ್ರಶಸ್ತಿ ಪ್ರಧಾನೋತ್ಸವದಲ್ಲಿ ಡಿ.ಲಿಟ್ ಪ್ರಶಸ್ತಿಯಿಂದ ಶಾಸ್ತ್ರಿಗಳನ್ನು ಗೌರವಿಸಿತು. ಮಾನಸ ಗಂಗೋತ್ರಿಯಲ್ಲಿ ಪ್ರಶಸ್ತಿಯನ್ನು ಸ್ವೀಕರಿಸುತ್ತ ಕೃಷ್ಣಶಾಸ್ತ್ರಿಗಳು "....... ಈ ಗಂಗೋತ್ರಿಯ ಗಂಗೆ ಎಲ್ಲಾ ಮಾಸಗಳಲ್ಲಿಯೂ ಕಾವೇರಿಯೊಡನೆ ಹರಿದು ವಹಿಸಿ ಕನ್ನಡ ಜನದ ಸ್ನಾನಪಾನಗಳಿಗೆ ಅನುವಾಗಲಿ ! ಸಾರಸ್ವತ ಬೆಳೆ ಬೆಳೆಯಲಿ, ಜನತೆ ಬದುಕಲಿ, ನಾಡು ಪವಿತ್ರವಾಗಲಿ !" ಎಂದು ಶಿಸಿದರು.

5ನೇ ಏಪ್ರಿಲ್ 1962 ರಂದು ಕೃಷ್ಣಶಾಸ್ತ್ರಿಗಳ "ಬಂಕಿಮ ಚಂದ್ರ" ಗ್ರಂಥಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರಶಸ್ತಿ ದೊರೆಯಿತು. ಅವರ ಗೃಹದಲ್ಲಿ ಈ ಮನ್ನಣೆ ನೀಡಲಾಯಿತು. ಈ ಪುಸ್ತಕದ ಮುದ್ರಣ ಕಾರ್ಯವನ್ನು ಮೆಚ್ಚಿ ಕರ್ನಾಟಕ ರಾಜ್ಯದ ಉನ್ನತ ಪ್ರಶಸ್ತಿ ಬಿ.ಬಿ.ಡಿ. ವರ್ ಪ್ಲಸ್‌ನವರಿಗೆ ದೊರಕಿದಲ್ಲದ್ದೆ ಮೈಸೂರು ವಿಶ್ವವಿದ್ಯಾನಿಲಯವು ಉತ್ತಮ ಪ್ರಕಟಣೆ ಪ್ರಶಸ್ತಿಯನ್ನು ಕರ್ನಾಟಕ ರಾಜ್ಯದಿಂದ ಳಿಸಿತು.

'ಕನ್ನಡ ಕುಲದ ಆಧಾರಸ್ತಂಭ'

ಡಾ॥ ಎ.ಆರ್. ಕೃಷ್ಣಶಾಸ್ತ್ರೀ
ಅವರ ದೇಹಾವಸಾನ

## ಕೊನೆಯ ದಿನಗಳು – ನಿಧನ

ಕೃಷ್ಣಶಾಸ್ತ್ರಿಗಳು ಬೆಂಗಳೂರಿನ ಬಸವನಗುಡಿಯ ಬಾಂದುನವರ ಬೀದಿಯಲ್ಲಿರುವ ತಮ್ಮ ಸ್ವಗೃಹದಲ್ಲಿ 1968 ನೇ ಇಸವಿ ಫೆಬ್ರವರಿ 1 ರಂದು ರಾತ್ರಿ ನಿಧನರಾದರು. ಆ ಮನೆ ಇಂದಿಗೂ ಇದೆ. ಅವರ ಮಗಳಾದ ಡಾ॥ ಕೆ. ಶಾಂತಾರವರು ಅಲ್ಲಿ ವಾಸವಾಗಿದ್ದಾರೆ. ಆ ಮನೆಯ ವರಾಂಡದಲ್ಲಿ, ಶಾಸ್ತ್ರಿಗಳ ಕಾರ್ಯಕೊಠಡಿಗಳಲ್ಲಿ ಅದೆಷ್ಟು ಸಾಹಿತ್ಯ ಸಮಾಲೋಚನೆಗಳು, ಸಾಹಿತ್ಯ ಬುಗ್ಗೆಗಳು ಎದ್ದು ಬಂದವೋ! ಅವರಿದ್ದ ರಸ್ತೆ ಇಂದು ಡಾ॥ ಕೃಷ್ಣಶಾಸ್ತ್ರಿ ರಸ್ತೆ ಎಂದೂ ನಾಮಾಂಕಿತವಾಗಿದೆ.

ಬಸವಣ್ಣನವರು "ಸ್ಥಾವಿರಕ್ಕಳಿಉಂಟು ಜಂಗಮಕ್ಕಳಿವಿಲ್ಲ" ಎಂದಂತೆ ಶಾಸ್ತ್ರಿಗಳ ಸಾಹಿತ್ಯ ಕೊಡುಗೆ ಎಂದಿಗೂ ಅನಂತವಾಗಿರುತ್ತದೆ. 1960 ರಲ್ಲಿ ಮೈಸೂರು ವಿಶ್ವವಿದ್ಯಾನಿಲಯವು ಅವರಿಗೆ ಅರ್ಪಿಸಿದ್ದ ಡಿ.ಲಿಟ್ ಪ್ರಶಸ್ತಿಯನ್ನು ಸ್ವೀಕರಿಸುತ್ತಾ ಶಾಸ್ತ್ರಿಗಳು ಹೇಳಿದ್ದು "......... ನನ್ನ ವ್ಯಾಸಂಗವೆಲ್ಲಾ ಮೈಸೂರಿನಲ್ಲಿ, ನನ್ನ ಸೇವೆಯೆಲ್ಲಾ ಮೈಸೂರು ವಿಶ್ವವಿದ್ಯಾಲಯಕ್ಕೆ. ಅದು ಹುಟ್ಟಿದಾಗ ನಾನು ಆಗಲೇ ಕಾಲೇಜಿನ ಉಪಾಧ್ಯಾಯನಾಗಿದ್ದೆ. ಅದರ ಶೈಶವ ಬಾಲ್ಯ ಯೌವನಗಳಲ್ಲಿ ಅದರ ಜೊತೆಗೆ ಬಾಳಿ ಬೆಳಕಿ ಈಗ ನಾನು ಮುಪ್ಪಾಗಿದ್ದೇನೆ. ಆದರೆ ಸರಸ್ವತಿಗೆ ಮುಪ್ಪಿಲ್ಲ. ಆಕೆ ಚಿರಯೌವನೆ. ನನ್ನಂತಹ ಲಕ್ಷೋಪಲಕ್ಷ ಮಕ್ಕಳನ್ನು ಸಾಕುತ್ತಿರುವವಳು." ಅವರ ನಿಧನವನ್ನು ಹಂ.ಪ.ನಾ ಅವರು "ಸರಸ್ವತಿಯ ಮನೆಯಲ್ಲಿ ಕಳವು" ಎಂದು ಶೋಕಿಸಿದರು. ಅದಕ್ಕೆ ಮುಂಚಿತವಾಗಿಯೇ ಶಾಸ್ತ್ರಿಗಳ ಪ್ರತಿಕ್ರಿಯೆ ಹೀಗಿತ್ತು.

# ಡಾ.ಎ.ಆರ್.ಕೃಷ್ಣಶಾಸ್ತ್ರೀ (1890–1968)



## ಜೀವನ ಪಥ...

| | | | |
|---|---|---|---|
| 1890 | ಜನನ 12ನೇ ಫೆಬ್ರವರಿ; ಅಂಬಳೆ ಗ್ರಾಮ, ಚಿಕ್ಕಮಗಳೂರು ಬಳಿ, ತಂದೆ ವ್ಯಾಕರಣ ಮಹಾವಿದ್ವಾನ್ ಅಂಬಳೆ ಶ್ರೀರಾಮಕೃಷ್ಣ ಶಾಸ್ತ್ರೀ, ತಾಯಿ: ಶ್ರೀಮತಿ ಶಂಕರಮ್ಮ. | 1939 | ಪ್ರೊಫೆಸರ್ ಹಾಗೂ ಇಲಾಖೆಯ ಮುಖ್ಯಸ್ಥರಾಗಿ ಮೈಸೂರು ಮಹಾರಾಜಾ ಕಾಲೇಜಿಗೆ ವರ್ಗಾವಣೆ |
| 1905 | ತಂದೆಯವರೊಡನೆ ಹಾಗು ಪಾಠಶಾಲೆಯಲ್ಲಿ ಸಂಸ್ಕೃತ ಭಾಷಾಭ್ಯಾಸ. ಲೋಯರ್ ಸೆಂಕಡರಿ ಉತ್ತೀರ್ಣ, ಮದುವೆ, ಧರ್ಮಪತ್ನಿ: ಶ್ರೀಮತಿ ವೆಂಕಟಲಕ್ಷ್ಮಮ್ಮ. | 1941 | ಹೈದರಾಬಾದಿನಲ್ಲಿ ನಡೆದ ಇಪ್ಪತ್ತಾರನೇ ಕನ್ನಡ ಸಾಹಿತ ಸಮ್ಮೇಳನದ ಅಧ್ಯಕ್ಷತೆ |
| 1013 | ಮೈಸೂರು ಮಹಾರಾಜಾ ಕಾಲೇಜಿನಿಂದ ಬಿ.ಎ. ಪದವಿ, ಮೊದಲ ಶ್ರೇಣಿಯಲ್ಲಿ ಉತ್ತೀರ್ಣ (ಮೈಸೂರು ವಿಶ್ವವಿದ್ಯಾನಿಲಯ - ಚರಿತ್ರೆ ಮತ್ತು ಭಾಷೆಗಳು) | 1946 | ಪ್ರಾಧ್ಯಾಪಕ ವೃತ್ತಿಯಿಂದ ಸ್ವಯಿಚ್ಛಾ ನಿವೃತ್ತಿ |
| 1915 | ಮದರಾಸು ವಿಶ್ವವಿದ್ಯಾಸಿಲಯದಿಂದ ಎಂ.ಎ. ಪದವಿ (ಕನ್ನಡ ಮತ್ತು ಸಂಸ್ಕೃತ) ಸೆಂಟ್ರಲ್ ಕಾಲೇಜು, ಬೆಂಗಳೂರಿನಲ್ಲಿ ಕನ್ನಡ ಅಧ್ಯಾಪಕರಾಗಿ ನೇಮಕ) | 1956 | ಶಾಸ್ತ್ರಿಗಳ ಅಭಿಮಾನಿಗಳಿಂದ ಅವರಿಗೆ "ಅಭಿವಂದನೆ" ಗ್ರಂಥ ಸಮರ್ಪಣೆ |
| 1918 | ಸೆಂಟ್ರಲ್ ಕಾಲೇಜಿನಲ್ಲಿ 'ಕರ್ನಾಟಕ ಸಂಘ'ಶಾಸ್ತ್ರಿಗಳಿಂದ ಸ್ಥಾಪನೆ | 1960 | ಮೈಸೂರು ವಿಶ್ವವಿದ್ಯಾಸಿಲಯದಿಂದ ಗೌರವ ಡಿ.ಲಿಟ್ ಪ್ರಶಸ್ತಿ |
| 1919 | ಶಾಸ್ತ್ರಿಗಳಿಂದ 'ಪ್ರಬುದ್ಧ ಕರ್ನಾಟಕ' ತ್ರೈಮಾಸಿಕ ಪತ್ರಿಕೆಯಾಗಿ ಸ್ಥಾಪನೆ. ಮೈಸೂರಿನ ಪ್ರಾಚ್ಯಕೋಶಾಗಾರಕ್ಕೆ ವರ್ಗಾವಣೆ | 1961 | ಶಾಸ್ತ್ರಿಗಳ "ಬಂಕಿಮಚಂದ್ರ" ಕೃತಿಗೆ ಕೇಂದ್ರ ಸಾಹಿತ್ಯ ಅಕಾದೆಮ ಪುರಸ್ಕಾರ |
| 1927 | ಪುನಃ ಸೆಂಟ್ರಲ್ ಕಾಲೇಜಿಗೆ ವರ್ಗಾವಣೆ, ಕನ್ನಡ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ನೇಮಕ | 1968 | ಫೆಬ್ರವರಿ 1 ನೇ ಗುರುವಾರ, [redacted] ಮಾಸ, ಬೆಂಗಳೂರಿನ ಬಸವನಗುಡಿಯಲ್ಲಿದ್ದ ಸ್ವಗೃಹದಲ್ಲಿ ನಿಧನ |

ತಮ್ಮ ಆರಾಧ್ಯ ದೈವ ಶ್ರೀ ಇಡಗುಂಜಿ ಮಹಾಗಣಪತಿ ಹೆಸರಿನಲ್ಲಿ ಸ್ಥಾಪಿಸಿದ್ದ ಯಕ್ಷಗಾನ ಮೇಳದ ಹರಕೆಯಾಟವನ್ನು ಪ್ರತಿ ವರ್ಷ ನಡೆಸುವ ಸಂಪ್ರದಾಯವನ್ನು ಇಟ್ಟುಕೊಂಡಿದ್ದು, ಫೆ. 2ರಂದು ಇಡಗುಂಜಿಯಲ್ಲಿ ಜಾತ್ರೆ ಪ್ರಯುಕ್ತ ಸಂಜೆ ರಥೋತ್ಸವ ಕಾರ್ಯಕ್ರಮಗಳು ಮುಗಿದ ನಂತರ ರಾತ್ರಿ 11 ಗಂಟೆಗೆ ಜಿ.ಆರ್. ಪಾಂಡೇಶ್ವರರ ಕೃತಿ " ರಾಮಾವತಾರ" ಪ್ರಸಂಗವನ್ನು ಇವರ ನಿರ್ದೇಶನದಲ್ಲಿ ಪ್ರದರ್ಶನಗೊಂಡ ಬಳಿಕ "ಸೀತಾವಿಯೋಗ" ಆರಂಭವಾಯಿತು.

ಹೊಸ ಹೊಸ ಪ್ರಯೋಗಗಳನ್ನು ಮಾಡಿದರು ಅರ್ಧ ಚಂದ್ರಾಕೃತಿಯ ರಂಗ ಸಜ್ಜಿಕೆ ಕರುಣಾರಸಕ್ಕೆ ಸೂಕ್ತ ಅಭಿನಯ, ಮೇಳದ ಸಂಘಟನೆ, ಅಪ್ರತಿಮ ಮಾತುಗಾರಿಕೆ, ಚಿಂತನೆಗಳಿಂದ ಅಪರೂಪದ ಅಪೂರ್ವ ಕಲಾವಿದರಾಗಿದ್ದ ಶಂಭು ಹೆಗಡೆ ಪ್ರಥಮ ಬಾರಿಗೆ ಗೆಜ್ಜೆ ಕಟ್ಟಿದ ಸ್ಥಳದಲ್ಲೇ ಬದುಕಿನ ಕೊನೆಯ ಹೆಜ್ಜೆ ಹಾಕಿದರು.

**ಶ್ರೀ ರಾಜು ಅನಂತ ಸ್ವಾಮಿ**

ಸುಗಮ ಸಂಗೀತಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದ್ದ ರಾಜು ಅವರು ತಮ್ಮ 40ನೇ ವರ್ಷದಲ್ಲಿ ವಿಧಿವಶರಾದರು. ಸುಗಮ ಸಂಗೀತ ಕ್ಷೇತ್ರದ ದಿಗ್ಗಜ ಮೈಸೂರು ಅನಂತ ಸ್ವಾಮಿ ಅವರ ಪುತ್ರರಾಗಿದ್ದ ರಾಜು ಪ್ರತಿಭಾವಂತ ಗಾಯಕರಾಗಿ, ಕಿರುತೆರೆಯ ನಟರಾಗಿ ಜನಪ್ರಿಯರಾಗಿದ್ದರು. ಅನೇಕ ಯುವ ಗಾಯಕ ಗಾಯಕಿಯರನ್ನು ತರಬೇತಿ ಮಾಡಿದ್ದರು. ಹಲವಾರು ಜನಪ್ರಿಯ ಧ್ವನಿ ಸುರುಳಿಗಳನ್ನು ಹೊರತಂದಿದ್ದರು. ಅವರ ಅಕಾಲಿಕ ಮರಣದಿಂದ ಇನ್ನೂ ಉಜ್ವಲವಾಗಿ ಯುವ ಪ್ರತಿಭೆಯೊಂದು ಹಠಾತ್ತನೆ ಮಾಯವಾದಂತಾಗದೆ. ಸುಗಮ ಸಂಗೀತ ಕ್ಷೇತ್ರಕ್ಕೆ ನಷ್ಟವಾದಂತಾಗಿದೆ. ಅಗಲಿದ ರಾಜು ಅವರ ಆತ್ಮಕ್ಕೆ 'ಹಣತೆ' ತನ್ನ ಶ್ರದ್ಧಾಂಜಲಿಯನ್ನರ್ಪಿಸುತ್ತದೆ.

**ಡಾ॥ ಪಿ. ಜೆ. ಬಾಗಿಲ್ತಾಯ**

ಶಿವರಾಮ ಕಾರಂತ ವೇದಿಕೆಯ ಪೋಷಕ ಸದಸ್ಯರಾಗಿದ್ದ ಡಾ॥ ಪಿ. ಜೆ. ಬಾಗಿಲ್ತಾರರು ದಿನಾಂಕ 12-11-2008 ರಂದು ನಿಧನರಾದರು. ಪೋಲಿಸ್ ಇಲಾಖೆಯಲ್ಲಿ ಉನ್ನತ ಹುದ್ದೆಯನ್ನು ಅಲಂಕರಿಸಿದ ಅವರು ಅತ್ಯಂತ ಸರಳ ಸ್ವಭಾವದ ವ್ಯಕ್ತಿತ್ವದಿಂದ ಜನಾನುರಾಗಿಗಳಾಗಿದ್ದರು. ನಿವೃತ್ತಿಯ ನಂತರ ಹೋಟೇಲ್ ಉದ್ಯಮವನ್ನು ಬಳಸುತ್ತ ಬೆಂಗಳೂರಿನ ಅನೇಕ ಧಾರ್ಮಿಕ, ಸಾಂಸ್ಕೃತಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಸಂಸ್ಥೆಗಳಿಗೆ ತಮ್ಮ ತನು, ಮನ, ಧನ ಗಳನ್ನು ಅರ್ಪಿಸಿದರು. 80ಕ್ಕೂ ಹೆಚ್ಚು ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ತನ್ನ ಹುಟ್ಟೂರಾದ ಪಲಿಮಾರಿನ ದೇವಸ್ಥಾನ, ಮಠಗಳ ಅಭಿವೃದ್ಧಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಶಿವರಾಮ ಕಾರಂತ ವೇದಿಕೆ ಅವರ ನಿಧನಕ್ಕೆ ತನ್ನ ಸಂತಾಪವನ್ನು ವ್ಯಕ್ತಪಡಿಸುತ್ತದೆ.

ಸಣ್ಣ ಕತೆ

# ಗುಡ್ ಫ್ರೈಡೇ

"ಸಾರ್, ಸಾಹೇಬ್ರು ಕರೀತಿದ್ದಾರೆ"

"ಯಾವ ಸಾಹೇಬ್ರು ಗಡ್ಡದವರೋ ಗಡ್ಡ ಇಲ್ಲದಿರೋವ್ರೋ"

"ನಮ್ಮ ಯಜಮಾನ್ರು ಸಾರ್, ಜೋಸೆಫ್ ಸಾಹೇಬ್ರು"

"ಯಾಕೋ ನಿಮ್ಮ ಸಾಹೇಬ್ರು ಇವತ್ತು ಚರ್ಚಿಗೆ ಹೋಗಿಲ್ವ, ಭಾನುವಾರ ಅಲ್ವೇನೋ ಇವತ್ತು ದಿನ ಬದಲಾಯ್ತಾ ಇಲ್ಲಾ ನಿಮ್ಮ ಸಾಹೇಬ್ರು ಬದಲಾದ್ರೋ"

"ನಂಗೆ ಗೊತ್ತಿಲ್ಲ ಸಾರ್, ಏನು ಹೇಳ್ಲಿ ನಾನು ಹೋಗಿ"

"ಬಟ್ಟೆ ಹಾಕ್ಕೊಂಡು ಬರ್ತೀನಿ ಕಣೋ, ನೀನು ಮುಂದೆ ಹೋಗಿರು, ಅರ್ಜೆಂಟಾಗಿ ಬರ್ಬೇಕೇನೋ"

"ಹಾಗಂತ ಕಾಣಿಸ್ತದೆ" ವೇಲು ಹೊರಟು ಹೋದ. ಅವನು ಹೊರಟು ಹೋದರೂ ಆತನ ಮೈಯ ದುರ್ಗಂಧ ಇನ್ನೂ ಹೊರಟಿಲ್ಲ. ಅವನ ಯಜಮಾನ ಜೋಸೆಫ್, ನನ್ನ ಸ್ನೇಹಿತ ದಿನಾ ಸ್ನಾನ ಮಾಡುತ್ತಾನೆ. ಈ ವೇಲು ಹಾಳಾದವನು ಯಾವ ಪಂಗಡವಾದರೇನು ಸ್ನಾನ ಮಾಡಿ ಮೈಯ ವಾಸನೆ ಹೋಗಲಾಡಿಸಿಕೊಂಡರೇನು. ಆ ವಾಸನೆಗೆ ನನಗೆ ಉಮ್ಮಳಿಸಿ ಬಂದಂತಾಗುತ್ತದೆ. ಸಣ್ಣದಾಗಿ ಕೆಮ್ಮು ಬರುತ್ತದೆ. ಎದೆಯಲ್ಲಿ ಶ್ವಾಸ ಸಿಕ್ಕಿಕೊಂಡ ಹಾಗಾಗುತ್ತದೆ. ವೀಜ್ಹಿಂಗ್ ಬಂದರೂ ಬರಬಹುದು.ಬೇಗನೇ ಒಳ ಬಂದು ತುಸು ಆಫ್ಟರ್ ಶೇವ್ ಲೋಶನ್ ಬೆರಳ ಮೇಲೆ ಸುರಿದುಕೊಂಡು ಮೂಗಿನ ಹೊಳ್ಳೆಗಳಿಗೆ ಸವರುತ್ತೇನೆ, ತುಸು ಹಾಯೆನಿಸುತ್ತದೆ.

ಜೋಸೆಫ್‌ನ ಮನೆ ಮುಂದೆ ನನ್ನ ಕಾರು ನಿಲ್ಲಿಸಿದಾಗ ಯಾಕೋ ಇಂದು ಎಂದಿನಂತಿಲ್ಲ, ಮನೆ ಸುತ್ತ ಹತ್ತಿಪ್ಪತ್ತು ಜನ ಇಬ್ಬರು ಪೋಲೀಸು ಕಾನ್ಸ್ಟೇಬಲುಗಳು. ಅವರ ಮಗಳು ರೀನಾ,

"ಹಲೋ ಅಂಕಲ್"

"ಹಲೋ ಡಿಯರ್, ಡ್ಯಾಡಿ ಇದ್ದಾರ"

ಯಾಕೋ ತುಸು ಸಂಕೋಚಿಸಿದಂತೆ ಕಂಡು ಬಂತು. ಆಚೀಚೆ ನೋಡಿಕೊಂಡು,

"ಇಲ್ಲ. ಮಮ್ಮಿ ಇದ್ದಾರೆ. ಒಳ ಬನ್ನಿ ಅಂಕಲ್"

"ಅರೇ ಈಗ ತಾನೇ ವೇಲು..........." ಅವಳ ಕಣ್ಣಲ್ಲಿ ಭಯ ಮೂಡಿ ಬರುತ್ತದೆ. ನಾನು ಮಾತು ನಿಲ್ಲಿಸಿ ಮನೆಯ ಒಳ ಹೋಗುತ್ತೇನೆ. ಎರಡಂತಸ್ತಿನ ಮನೆ, ಕೆಳಗಿನ ಅಂತಸ್ತಿನಲ್ಲಿ ಸಾಮಾನು ಸರಂಜಾಮು ದಾಸ್ತಾನು ಮಾಡಿ ಇಟ್ಟಿದ್ದಾರೆ. ಸಂಜೀವಿನಿ ನಗರದ ಸೂಪರ್ ಮಾರ್ಕೆಟಿನ ಮಾಲೀಕ ಜೋಸೆಫ್ ಅಲ್ಲಿ ಬೇಕಾಗುವ ಸಾಮಾನುಗಳ ದಾಸ್ತಾನು ಇಲ್ಲಿ. ಕುವೈಟ್‌ನಲ್ಲಿ ಹತ್ತು ವರ್ಷಗಳ ಕಾಲ ಇದ್ದು ಹಿಂತಿರುಗಿದ ಬಳಿಕ ಸಂಜೀವಿನಿ ನಗರದಲ್ಲಿ ಸೂಪರ್ ಮಾರ್ಕೆಟ್ ತೆರೆದಿರುವ ಜೋಸೆಫ್ ಸ್ಥಿತಿವಂತ. ನನ್ನ ಬ್ಯಾಂಬೂ ಸರ್ವಿಸ್ ರೆಸ್ಟೋರೆಂಟ್‌ಗೆ ಬೇಕಾಗುವ ದಿನಸು ಸಾಮಾನುಗಳ ಅಲ್ಲಿಂದಲೇ ಬರಬೇಕು. ಹೀಗಾಗಿ ಹಲವು ವರ್ಷಗಳ ಪರಿಚಯ. ಅಲ್ಲದೆ ನಾಲ್ಕನೆಯ ತರಗತಿಯಲ್ಲಿ ಓದುತ್ತಿರುವ ನನ್ನ ಮಗ ರೋಹಿತ್ ಅವನ ಮಗಳು ರೀನಾಳಿಂದಾಗಿಯೂ ನನ್ನ ಪರಸ್ಪರ ಪರಿಚಯ ಸ್ನೇಹಕ್ಕೆ ತಿರುಗಿತ್ತು.

ಬಾಗಿಲು ಹಾಕಿಕೊಂಡು ಮೇಲಿನ ಅಂತಸ್ತಿಗೆ ತೆರಳಿದ ನಾನೂ ಕುತೂಹಲ ಭರಿತನಾಗಿದ್ದೆ. ದೊಡ್ಡಮನೆ, ಕೆಳಗೆ ಮೇಲೆ ಸೇರಿ ನಲ್ವತ್ತು ಚದರವಿರಬಹುದು. ಕೆಳಗಿನ ಅಂತಸ್ತು ಬಾಡಿಗೆಗೆ ಇತ್ತರೆ ತನ್ನ ಕೈ ಬಿಟ್ಟು ಹೋದೀತೆಂಬ ಭಯದಿಂದ ಅದನ್ನು ಗೋಡೌನ್ ಆಗಿ ಪರಿವರ್ತಿಸಿದ್ದ ಜೋಸೆಫ್. ಎಡಗೈ ಬಲಗೈಯನ್ನು ನಂಬುವ ಕಾಲ ಇದಲ್ಲ ಅವನ ಮೂಲ ಮಂತ್ರ. ತಿಂಗಳಿಗೆ ಕಡಿಮೆಯೆಂದರೆ ಹದಿನೈದು ಹದಿನಾರು ಸಾವಿರ ಬಾಡಿಗೆ ಬರುವ ಮನೆಯನ್ನು ಉಗ್ರಾಣವನ್ನಾಗಿ ಮಾಡಿಯಾರೇ ಯಾರಾದರೂ.

"ಹಲೋ ರಾವ್ ಹಿಂದಿನ ಕೋಣೆಯಿಂದ ಬಂದ ಜೋಸೆಫ್

" ಹಲೋ, ಏನೋ ಇದೆಲ್ಲಾ! ವೇಲು ಒಂದು ಹೇಳಿದ್ರೆ ನಿನ್ನ ಮಗಳು ಬಂದು ಇನ್ನೊಂದು ಹೇಳಿದ್ಲು ಏನಿದೆಲ್ಲಾ.........."

"ರಾವ್, ಒಂದು ಹೆಲ್ಪ್ ಆಗ್ಬೇಕಾಗಿತ್ತು. ಬಾ ಇಲ್ಲಿ ಹೇಳ್ತೇನೆ" ಅವನ ಕಣ್ಣುಗಳಲ್ಲಿ ಅಧೈರ್ಯ ತುಂಬಿದುದು ಸ್ಪಷ್ಟವಾಗಿತ್ತು. ಕುಳಿತಿದ್ದ ಕುರ್ಚಿಯನ್ನು ಅತ್ತಿಂದಿತ್ತ ಅಲ್ಲಾಡಿಸಲು ಪ್ರಯತ್ನಿಸಿ ಬಳಿಕ "ನನ್ನ ಪಕ್ಕದ ಸೈಟಿನ ವಿಚಾರ ನಿಂಗೆ ತಿಳಿದಿದೆಯಲ್ಲ. ನಾನು ಅಂದುಕೊಂಡಿದ್ದಂತೆ ಎಲ್ಲಾ ನಡೀತು. ಇವತ್ತು ಬೆಳಿಗ್ಗೆ ಡಿಪಿಸಿ ಯವರು ಎರಡು ಟ್ರಕ್ಕಿನಲ್ಲಿ ಬಂದ್ರು, ಡಿಪಿಸಿ ಅಂದ್ರೆ ಗೊತ್ತು ತಾನೇ. ಪಕ್ಕದ ಸೈಟಿನಲ್ಲಿರೋ ಶೆಡ್‌ನಲ್ಲಿರೋವ್ರನ್ನ ಖಾಲಿ ಮಾಡೋಕೆ ಹೇಳಿದ್ರು. ಅವರು ಮೊದಲು ಒಪ್ಲಿಲ್ಲ ಐವತ್ತರ ಸಂಖ್ಯೆಯಲ್ಲಿದ್ದ ಡಿಪಿಸಿಯವರನ್ನು ಕಂಡು ಹೆದರಿ ಕೊನೆಗೆ ಗಂಟುಮೋರೆ ಮಾಡಿಕೊಂಡು ಹೋದ್ರು. ಇವರು ಆ ಶೆಡ್ ಆಕ್ಯುಫೈ ಮಾಡಿದ್ರು. ಅಂದುಕೊಂಡಂತೆ ಸುಲೆಮಾನ್ ಕಡೆಯವ್ರು ಪೋಲೀಸ್ ಕಂಪ್ಲೆಂಟ್ ಕೊಟ್ರು. ಇಬ್ಬರು ಕಾನ್ಸ್ಟೆಬಲ್ ಬಂದ್ರು. ಅಲ್ಲಿಗೆ ಎಲ್ಲಾ ಮುಗೀತು ಅಂದ್ಕೊಂಡೆ. ಆದ್ರೆ ಆ ಸುಲೇಮಾನ್ ಈ ಏರಿಯಾ ಕಾಂಗ್ರೆಸ್ ಲೀಡರ್‌ನ್ನು ಹಿಡ್ದ. ಅವನೂ ಅವನ ಜಾತಿಯಂತನೇ, ಲಂಚ ಜಾತಿ, ಸೇರಿ ಹೆಲ್ತ್ ಮಿನಿಸ್ಟರನ್ನು ಹಿಡಿದ್ರು, ಅವ್ರೂ ಅದೇ ಜಾತಿಯವ್ನೇ. ಅಲ್ಲಿಂದ ಕಮಿಷನರ್ ಆಫೀಸಿಗೆ ಫೋನ್ ಹೋಗಿರ್ಬೇಕು, ಮಧ್ಯಾಹ್ನದ ಮೇಲೆ ಸರ್ಕಲ್ ಇನ್ಸ್‌ಪೆಕ್ಟರ್ ಮತ್ತು ಎಸ್. ಐ. ಬಂದಿದ್ರು. ಸರ್ಕಲ್ ಒಂದೇ ಬಾರಿಗೆ, 'ಯಾಕ್ರಿ, ನಿಮ್ಮನ್ನು ಅರಷ್ಟು ಮಾಡಬಾರ್ದು ಅಂದ್ರು. ತಪ್ಪು ಯಾರದು ಮೊದಲು ನೋಡಿಕೊಳ್ಳಿ ಎಂದನ್ನ ಬೇಕು ಎಂದಿದ್ದೆ ಆದರೂ ಬಾಯಿ ಬಿಡ್ಲಿಲ್ಲ. ಅವನು ಹೊರಟು ಹೋದ ಒಂದು ಗಂಟೆಯ ಕೆಳಗೆ ಎಸ್. ಐ. ಕರೀತಾ ಇದ್ದಾರೆ ಸ್ಟೇಷನ್ನಿಗೆ ಬರ್ಬೇಕು ಅಂತ ಕೇಳ್ಕೊಂಡು ಪಿ.ಸಿ. ಬಂದಿದ್ದನಂತೆ. ಆಗ ನಾನು ಮನೇನಲ್ಲಿ ಇರ್ಲಿಲ್ಲ. ಬಂದ ಕೂಡಲೇ ತಿಳೀತು. ಯಾರು ಬಂದರೂ ಮನೇನಲ್ಲಿ ನಾನಿಲ್ಲ ಅಂತ ಹೇಳಿ ಅಂದಿದ್ದೆ" ನನಗೆ ಈ ಗಲಾಟೆಯ ಹಿನ್ನಲೆ ತಿಳಿದಿದೆ ಆದರೆ ಇಷ್ಟೊಂದು ದೂರ ಹೋದೀತೆಂದು ಅಂದು ಕೊಂಡಿರಲಿಲ್ಲ.

" ಎಸ್. ಐ., ಸರ್ಕಲ್, ಹೋಂ ಸೆಕ್ರಟರಿ ಎಲ್ಲಾ ನಿನ್ನ ಕಡೆ ಅಂತ ನೀನೇ ಹೇಳ್ತಿದ್ದೆ"

" ಹಾಗೆ ನಾನು ಅಂದುಕೊಂಡಿದ್ದು, ಆದ್ರೆ ಎಲ್ಲಾ ಉಲ್ಟಾ ತಿರುಗಿ ಬಿದ್ರು"

" ಅದ್ಕೇ ನಾನು ಅನ್ತಿದ್ದುದು ಗಲಾಟೆ ಮಾಡೋದಕ್ಕೆ ಹೋಗ್ಬೇಡಾಂತ"

" ನೀನೂ ಇದನ್ನು ಗಲಾಟೆ ಅಂತಿಯೋ?, ಆಗಿದ್ದು ಆಯ್ತಲ್ಲ ಏನು ಮಾಡ್ಲಿ ಹೇಳು?"

" ನನ್ನನ್ನು ಯಾಕೆ ಈಗ ಬರಾಕೆ ಹೇಳ್ದೆ?

"ಆ ಎಸ್.ಐ. ನಿನ್ನ ಫ್ರೆಂಡು ತಾನೇ. ದಿನಾ ನಿನ್ನ ಹೋಟೇಲಿನಲ್ಲಿ ಬಿಟ್ಟಿ ಇಡ್ಲಿ ವಡೆ ತಿಂದು ಕಾಫಿ ಕುಡ್ದು ಫ್ರೆಂಡಾಗಿದ್ದಾನೆ ತಾನೇ. ಫೋನು ಮಾಡಿ ಕೇಳು ಯಾಕೆ ನನ್ನನ್ನು ಸ್ಟೇಶನಿಗೆ ಬರೋದಕ್ಕೆ ಹೇಳಿರೋದು ಅಂತ. ನಾನೀಗ ಅಲ್ಲಿ ಹೋದ್ರೆ ಯಾವುದೋ ನೆಪ ಹೇಳಿ ಕಂಬಿ ಹಿಂದೆ ಹಾಕಿದ್ರೆ?''

ನಾನು ಅಲೋಚನೆ ಮಾಡುತ್ತೇನೆ. ವಾರಂಟು ಇಲ್ಲದೆ ಮನೆಯ ಒಳಗೆ ಬಂದು ಬಂಧಿಸುವಂತಿಲ್ಲ. ಅದರ ಮೊದಲೊಂದು ಜಾಮೀನು ಮಾಡಿಸಿ ಇಟ್ಟುಕೊಂಡಿದ್ದರೆ ಉತ್ತಮ. ''ಮುಠ್ಠಾಳ ಕೆಲಸಕ್ಕೆ ಯಾಕೆ ಕೈ ಹಾಕಿದೆ? ಮೊದ್ಲು ಆ್ಯಂಟಿಸಿಪೇಟರಿ ಬೈಲ್ ಮಾಡು''

'' ಆಗ಼್ೇ ಲಾಯರಿಗೆ ಹೇಳಿಯಾಗಿದೆ. ಸಾಯಂಕಾಲ ಪೇಪರ್ ತಕೊಂಡು ಬರಬಹುದು.

ಊರಲ್ಲಿ ಇಲ್ಲ ಮದ್ರಾಸಿಗೆ ಹೋಗಿದ್ದೇನೆ ಅಂತ ಹೇಳೋಕೆ ಮನೆಯಲ್ಲಿ ತಿಳಿಸಿದ್ದೇನೆ''.

'' ಇರು ಒಂದ್ನಿಮಿಷ'' ಫೋನು ಎತ್ತಿಕೊಂಡು ಪೋಲಿಸು ಸ್ಟೇಶನಿಗೆ ಪೋನು ಮಾಡುತ್ತೇನೆ. ಆದರೆ ಅಲ್ಲಿ ಎಸ್.ಐ. ಇಲ್ಲ ನನ್ನ ಹೆಸರು ಹೇಳಿ ಪೋನು ಕೆಳಗಿಡುತ್ತೇನೆ.

''ಈಗ ಎಲ್ಲೂ ಹೋಗ್ಬೇಡ, ಪೊಸಿಶನ್ ತಿಳ್ಕೊಂಡು ನಾನೇ ಪೋನು ಮಾಡ್ತೇನೆ''

ಜೋಸೆಫ್ ಕುವೈಟ್‌ನಲ್ಲಿರುವಾಗ ತೆಗೆದುಕೊಂಡ ಸೈಟು ಈಗಿರುವ ಮನೆ ಅರವತ್ತು ನಲವತ್ತರ ಜಾಗ, ಮೂಲೆ ಸೈಟು ಬೇಕೆಂದಿದ್ದನಂತೆ ಇಲ್ಲಿ ಸಂಜೀವಿನಿ ನಗರದ ಗಂಗಾದರಪ್ಪ ಲೇಔಟ್‌ನಲ್ಲಿ. ಆಗಿನ್ನು ಲೇಔಟ್ ಆಗಿರಲಿಲ್ಲ. ಹತ್ತಾರು ಜನ ಸೇರಿ ಸೊಸೈಟಿ ಮಾಡಿ ಜಾಗ ತೆಗೆದುಕೊಂಡು ಕಷ್ಟಪಟ್ಟು ಮಾಡಿರೋ ಬಡಾವಣೆ. ಇವನು ಕೇಳಿದ್ದ ಹಣಕ್ಕೆ ಸರಿಯಾಗಿ ನಿವೇಶನ ದೊರೆಯಿತು. ಆದರೆ ಮೂಲೆ ನಿವೇಶನವಲ್ಲ ಯಾಕೆಂದರೆ ರಸ್ತೆಗಳನ್ನು ಮಾಡುವಾಗ ಲೆಕ್ಕ ತಪ್ಪಿ ಇವನ ನಿವೇಶನದ ಬಳಿಕ ಉಳಿದ ಒಂದಷ್ಟು ಜಾಗ ಸೊಸೈಟಿಯ ಕೈಯಲ್ಲಿತ್ತಲ್ಲದೇ ಇನ್ನಾರಿಗೂ ಕೊಟ್ಟಿರಲಿಲ್ಲ.

ಜೋಸೆಫ್ ಕುವೈಟ್‌ನಿಂದ ಹಿಂತಿರುಗಿ ಮನೆ ಕಟ್ಟಿ ಸೂಪರ್ ಮಾರ್ಕೆಟ್ ತೆರೆದ ಬಳಿಕವೂ ಆ ನಿವೇಶನ ಯಾರಿಗೂ ಹೋಗಿರಲಿಲ್ಲ. ಈ ನಡುವೆ ಸೊಸೈಟಿಯ ಕಾರ್ಯದರ್ಶಿ ತ್ಯಾಗರಾಜನ ಮಗಳ ನಡೆಯಿತು. ಅದಕ್ಕೆ ಬೇಕಾದ ಸಾಂಬಾರ ದಿನಿಸು ಜೋಸೆಫನ ಸೂಪರ್ ಮಾರ್ಕೆಟನಿಂದ, ಅಲ್ಲದೆ ಮಿಕ್ಕುಳಿದ ಸಾಮಾನುಗಳ ಪಟ್ಟಿ ಸೇರಿ ಬಿಲ್ ಬಹಳ ದೊಡ್ಡದಾಯಿತು. ಹೇಗೂ ಜೋಸೆಫ್ ಕೇಳುತ್ತಿದ್ದ ತುಂಡು ಜಾಗದ ಬೆಲೆಯೂ ದುಬಾರಿಯಾಗಿರಲಿಲ್ಲ ಅಲ್ಲಿಂದಲ್ಲಿಗೆ ಅದು ಹೊಂದಾಣಿಕೆಯಾದ್ದರಿಂದ ಜೋಸೆಫ್ ನಿಯಮಾವಳಿಯ ಪ್ರಕಾರ ಸೊಸೈಟಿಯ ಸದಸ್ಯನೂ ಆಗಿದ್ದರಿಂದ ಆ ತುಂಡು ಜಾಗ ಸ್ವಲ್ಪವೇ ಹಣದ ಪಾವತಿಯಿಂದ ಜೋಸೆಫ್‌ನಿಗೆ ರಿಜಿಸ್ಟ್ರಿ ಆಯಿತು. ಅದೇ ಸಮಯದಲ್ಲಿ ಸೊಸೈಟಿಯ ಅಧ್ಯಕ್ಷ ಆ ತುಂಡು ಜಾಗವನ್ನು ತನ್ನ ಮಗಳು ಜಯಂತಿಗೆ ಮಾಡಿಕೊಟ್ಟ.

ಘರ್ಷಣೆ ಪ್ರಾರಂಭವಾಯಿತು ಜಯಂತಿ ಕೋರ್ಟಿಗೆ ಹೋಗಿ ಜೋಸೆಫನು ಆ ಸ್ಥಳದೊಳಗೆ ಬರದಂತೆ ತಡೆಯರ್ಜಿ ತಂದಳು. ಜೋಸೆಫನೂ ಕೋರ್ಟಿಗೆ ಹೋಗಿ ಆ ಸ್ಥಳ ತನ್ನ ಹೆಸರಿಗೆ ರಿಜಿಸ್ಟ್ರಿ ಆದುದು ಜಯಂತಿಯ ರಿಜಿಸ್ಟ್ರಿ ಕಾನೂನು ಬಾಹಿರವಾದುದು ಎಂದು ಖಟ್ಲೆ ದಾಖಲು ಮಾಡಿದ್ದ.

“ಹಲೋ, ಎಸ್. ಐ. ಮುನಿಯಪ್ಪನವರಿದ್ದಾರಾ?''
“ಹಲೋ, ನೀವ್ಯಾರು ಸಾರ್ ಮಾತನಾಡ್ತಾ ಇರೋದು?
“ನಾನು ರಾವ್ ಅಂತ, ಬ್ಯಾಂಬೂ ಸರ್ವಿಸ್ ರಸ್ಟೋರೆಂಟ್‌ನಿಂದ''
“ನಮಸ್ಕಾರ ಸಾರ್, ನಾನು ಅಶ್ವತ್ಥಪ್ಪ, ಕಾನ್ಸ್ಟೆಬಲ್, ಚೆನ್ನಾಗಿದ್ದೀರಾ ಸಾರ್''
ಎಸ್.ಐ. ಜೊತೆ ದಿನಾ ಬರುತ್ತಿದ್ದ ಪೇದೆ ಅವನೇ, ಬಿಟ್ಟಿ ಕಾಫಿ ಅವನೂ ಕುಡಿಯುತ್ತಾನೆ.
“ನಾನು ಚೆನ್ನಾಗಿದೀನಪ್ಪ, ನಿಮ್ಮ ಸಾಹೇಬ್ರು ಇದ್ದಾರಾ?''
“ ಇದ್ದಾರೆ, ಈಗ್ಲೆ ಕೊಡ್ತೀನಿ'' ಆ ಕಡೆಯಿಂದ 'ಸಾರ್, ರಾವ್ ಸಾಹೇಬ್ರು ಮಾತಾಡ್ತಾ ಇದ್ದಾರೆ' ಎನ್ನುವುದು ಕೇಳಿ ಬರುತ್ತದೆ.
'ನಮಸ್ಕಾರ ರಾಯರೇ, ಚೆನ್ನಾಗಿದ್ದೀರಾ! ಏನು ಸಮಾಚಾರ? ಆಗಲೇ ಒಂದು ಸಲ ಫೋನು ಮಾಡಿದ್ರಂತಲ್ಲಾ! ನಾನು ಕಮಿಷನರ್ ಆಫೀಸಿಗೆ ಹೋಗಿದ್ದೆ, ಈಗ ತಾನೇ ಬಂದೆ''
“ತಾವು ಚೆನ್ನಾಗಿದ್ದೀರಾ? ಸುಮ್ನೆ ಹೀಗೆ ತಮ್ಮ ಆರೋಗ್ಯ ವಿಚಾರಿಸೋಣ ಅಂತ ಫೋನು ಮಾಡಿದ್ದೆ''
“ಥ್ಯಾಂಕ್ಯೂ''
“ ಆ ಮೇಲೆ ಒಂದು ಸಣ್ಣ ವಿಚಾರ, ನನ್ನ ಸ್ನೇಹಿತ ಜೋಸೆಫನ ವಿಚಾರ ತಿಳ್ಕೊಳ್ಳಾಣ ಅಂತ. ಬೆಳಗ್ಗೆ ಏನೋ ಆಯ್ತಂತಲ್ಲಾ ಅವನ ಮನೆಯ ಪಕ್ಕ ಸರ್ಕಲ್ ಏನೋ ತುಸು ಖಾರವಾಗಿದ್ರಂತೆ ಹೇಳ್ದ. ಪೊಸಿಷನ್ ಏನೂ ಅಂತ.........''
“ ಓ ನಿಮಗೂ ತಿಳಿದಿದ್ಯಾ! ಏನೋ ಕೇಸು ಜೋಸೆಫನಿಗೆ ಫೇವರಾಗಿಲ್ಲ''. ಮೇಲಿನಿಂದ ಪ್ರೆಷರ್ ಬರ್ತಾ ಇದೆ. ಅಂದಹಾಗೆ ಜೋಸೆಫ ಎಲ್ಲಿ ಹೇಳಿ ?''
“ ಏನೋ ಮದ್ರಾಸಿಗೆ ಹೋಗಿದ್ದಾನಂತೆ. ಅವನ ಹೆಂಡ್ತಿ ಹೇಳಿದ್ಲು. ಅವಳೇ ನನಗೆ ಫೋನು ಮಾಡಿ ಹೇಳಿರೋದು''
“ ಹೂಂ ನನಗೂ ಹಾಗೇ ಅಂದ್ರು. ನಾನೂ ಫೋನು ಮಾಡಿದ್ದೆ. ಸಿಕ್ಕಿದ್ರೆ ತಕ್ಷಣ ನನ್ನನ್ನ ನೋಡ್ಬೇಕಂತ ಹೇಳಿ. ಇಷ್ಟೆಲ್ಲಾ ಗಲಾಟೆ ಎಬ್ಬಿಸಿ ಆ ಮನುಷ್ಯ ಊರು ಬಿಟ್ಟು ಹೋಗಿದ್ದಾನೆ ಅಂದ್ರೆ! ಯಾವುದಕ್ಕೆ ಇಂಪಾರ್ಟೆನ್ಸ್ ಕೊಡ್ಬೇಕು ತಿಳಿಯಲ್ವಾ''
“ಏನಾದ್ರೂ ಅರೆಸ್ಟ್ ಗಿರೆಸ್ಟ್.......''
“ ಛೇ ಛೇ ಅಂತಾದ್ದೇನಿಲ್ಲ. ಅರೆಸ್ಟು ವಾರೆಂಟು ಎಲ್ಲಿದೆ? ಆ ಕಡೆಯವರು ಪೇಪರು ತಕ್ಕೊಂಡು ಕಮಿಷನರ್ ಆಫೀಸಿಗೆ ಹೋಗಿದ್ದಾರೆ. ಒಂದು ಕಡೆಯ ಕೇಸು ಕೇಳ್ಕೊಂಡು ಅಲ್ಲಿಂದ ಆರ್ಡರ್ ಬರ್ತದೆ. ಈ ಮನುಷ್ಯ ತನ್ನ ಕೇಸು ಪ್ರೆಸೆಂಟ್ ಮಾಡ್ಬೇಕೋ ಬೇಡ್ವೋ! ತಪ್ಪಿಸಿಕೊಂಡ್ರೆ? ಅವರಾದ್ರೂ ಏನು ಅಂದ್ಕೊಳ್ತಾರೆ? ತಪ್ಪು ಇರೋದ್ರಿಂದ ಕಣ್ಮರೆ ಆಗಿದ್ದಾನೆ ಅಂತ. ಕೇಸು ಫೈಟ್ ಔಟ್ ಮಾಡೋದು ಬೇಡ್ವಾ?''
“ ಸರಿ ಸಾರ್, ನನ್ನ ಕೈಗೆ ಸಿಕ್ಕಿದ್ರೆ ತಕ್ಷಣ ನಿಮ್ಮನ್ನು ನೋಡ್ಬೇಕಂತ ಹೇಳ್ತೀನಿ''
ಫೋನು ಕೆಳಗಿಟ್ಟವನೇ ಪುನಃ ಜೋಸೆಫನಿಗೆ ಫೋನು ಮಾಡುತ್ತೇನೆ, ಥೆರೆಸಾ ಫೋನು ಎತ್ತಿಕೊಳ್ಳುತ್ತಾಳೆಂದು ನನಗೆ ಮೊದಲೇ ತಿಳಿದಿದೆ, ಪರಿಚಯಸ್ಥರಿಲ್ಲದಿದ್ದರೆ ಜೋಸೆಫ ಮದ್ರಾಸಿಗೆ ಹೋಗಿದ್ದಾನೆಂಬ ಉತ್ತರ ಬರುತ್ತದೆ.

“ ನಾನು ರಾವ್ ಮಾತಾಡೋದು”

“ ಒಂದ್ನಿಮಿಷ ಇರಿ ಕರಿತೀನಿ”

“ ಹಲೋ ರಾವ್, ಏನು ಸಮಾಚಾರ?” ಜೋಸೆಫನ ಧ್ವನಿ ಕೇಳಿ

“ ನಿಮ್ಮ ಮನೆ ಹತ್ತಿರ ಏನಾದ್ರು ಗಲಾಟೆ ಇದೆಯಾ? “ ನಾನು ಕೇಳುತ್ತೇನೆ.

“ ಪೋಲೀಸ್ ನವ್ರು ಇನ್ನು ಇದ್ದಾರಂತ ಕಾಣಿಸ್ತದೆ. ಡಿಪಿಸಿನವರು ಒಂದು ಹತ್ತು ಜನ ಕಾಂಪೌಂಡಿನ ಒಳಗೆ ಇದ್ದಾರೆ”.

“ ಎಸ್.ಐ. ನಿನ್ನನ್ನ ತಕ್ಷಣ ನೋಡ್ಬೇಕಂತೆ, ಫೈಲು ತಕ್ಕೊಂಡು ಕಮಿಷನರ್ ಆಫೀಸಗೆ ಹೋಗ್ಬೇಕಂತೆ. ಅಲ್ಲಿ ಎರಡೂ ಕಡೆಯವರ ಕೇಸು ನೋಡ್ಬೇಕಂತೆ”

“ ಮಧ್ಯಾಹ್ನ ಸರ್ಕಲ್ ಆ ರೀತಿ ಹೇಳಿದ ಮೇಲೆ ಅಲ್ಲಿ ಹೋಗೋದೇ ಡೇಂಜರ್, ಏನಾದ್ರು ನೆಪ ಹೇಳಿ ಒಳ್ಗೆ ಹಾಕ್ಬಹುದು. ನಿನ್ನೆ ಅವ್ರೆಲ್ಲಾ ನನ್ನ ಕಡೆ ಇದ್ರು ಆ ಧೈರ್ಯದ ಮೇಲೆ ಇವತ್ತು ಈ ರೀತಿ ನೋಡಿರೋದು. ಈಗ ಪ್ಲೇಟ್ ಬದ್ಲಾಯಿಸಿದ್ದಾರೆ.

“‘ ಹಾಗಿದ್ರೆ ಫೈಲ್ ಬರೋತನಕ ಯಾರ ಕಣ್ಣಿಗೂ ಬೀಳದಿರೋದು ಉತ್ತಮ”

“ ಅದಕ್ಕೂ ಎರಡು ದಿನ ಆದೀತು. ನಾಳೆ ಕೋರ್ಟಿನಲ್ಲಿ ಫೈಲ್ ನೋಡಿದ್ರೆ ನಾಳೆ ಸಾಯಂಕಾಲ ಏನಾದ್ರೂ ಅಬ್ಜೆಕ್ಷನ್ ಇದೆಯಾ ಅಂತ ಲೋಕಲ್ ಪೋಲೀಸರು ಸ್ಟೇಶನಿನಲ್ಲಿ ವಿಚಾರಿಸ್ತಾರೆ. ಇವ್ರು ಎಲ್ಲ ಅಂದ್ರೆ ಆ ಬಳಿಕ ಕೊಡ್ಬೇಕು, ನಾಡಿದ್ದು ಸಿಕ್ಕೀತು”

“ ಅಲ್ಲಿ ತನ್ಕ ಸ್ವಲ್ಪ ಜೋಪಾನ ವಾಗಿರೋದು ಮೇಲು, ಜೊತೆಯಲ್ಲಿರೋದಕ್ಕೆ....”

“ ಒಂದಿಬ್ಬರು ಬಾಡಿಗಾರ್ಡು ಇದ್ದಾರೆ. ನಮ್ಮ ಸೂಪರ್ ಮಾರ್ಕೆಟ್ ಹುಡುಗರೇ, ಅಲ್ಲದೆ ಈ ಡಿ.ಪಿಸಿನವರು ಹತ್ತು ಜನ ಇಲ್ಲೇ ಮಲಗ್ತಾರೆ. ಅವರ ಊಟಕ್ಕೂ ತಯಾರಿ ಮಾಡಿಯಾಗಿದೆ”.

“ಸರಿ, ನಾಳೆ ನೋಡೋಣ ಹಾಗಿದ್ದಲ್ಲಿ”

“ಏನಾದ್ರೂ ಸಮಾಚಾರ ಇದ್ರೆ ತಿಳಿಸ್ತೇನೆ”

ಜಯಂತಿ ಕೋರ್ಟಿನಿಂದ ತಡೆಯಾಜ್ಞೆ ತಂದದ್ದು, ಜೋಸೆಫ್ ಕೋರ್ಟಿಗೆ ಹೋದದ್ದು ಇವೆಲ್ಲ ಹಳೆಯ ಮಾತು. ಇಂದಿಗೆ ಏಳೆಂಟು ವರ್ಷಗಳ ಹಿಂದಿನ ವಿಚಾರ. ನಮ್ಮ ಕೋರ್ಟುಗಳ ಬಗ್ಗೆ ಯಾರೂ ಏನೂ ಹೇಳಬೇಕಾಗಿಲ್ಲ. ಸಶಕ್ತರಾಗಿ ಈ ವಿಚಾರಗಳನ್ನು ಇಷ್ಟೊಂದು ವರ್ಷಗಳ ತನಕ ತಳ್ಳಿಕೊಂಡು ಬಂದಿರುವುದೇ ಅದರ ಕಾರ್ಯ ದಕ್ಷತೆಗೆ ನಿದರ್ಶನ. ಅವತ್ತೇ ಒಂದು ದಿನ ನಿಶ್ಚಯಿಸಿ ಇದು ಇಂತಹವರದ್ದು ಎಂಬ ತೀರ್ಮಾನ ತೆಗೆದುಕೊಂಡಿದ್ದರೆ ಅಲ್ಲಿಗೇ ಸಮಸ್ಯೆ ಮುಗಿಯುತ್ತಿತ್ತು. ಆದರೆ ಸಮಸ್ಯೆಗಳ ಕೊನೆ ಯಾರಿಗೆ ಬೇಕು. ಇಂದಿನ ದಿನಗಳಲ್ಲಿ ಸಮಸ್ಯೆ ಹುಟ್ಟಿಸುವುದು ಅದನ್ನು ಬೆಳೆಸುವುದು ಕಷ್ಟಪಡುವವರನ್ನು ಕಂಡು ಒಳಗೊಳಗೆ ಸಂತಸ ಪಡುವುದು ಇವೇ ಹವ್ಯಾಸವಾಗಿರುವಾಗ ಕೋರ್ಟುಗಳಲ್ಲಿ ಇನ್ನೇನು ಅಪೇಕ್ಷಿಸಲಾದೀತು?

ಇವರೀರ್ವರ ಹೆಸರಿನಲ್ಲಿ ರಿಜಿಸ್ಟರ್ ಆಗಿದೆ. ಇಬ್ಬರಲ್ಲೂ ರೆಕಾರ್ಡುಗಳಿವೆ. ಹಾಗಿದ್ದರೆ ಯಾರು ಸರಿ ಯಾರು ತಪ್ಪು. ಈ ನಡುವೆ ಜಯಂತಿ ಆ ತುಂಡು ಜಾಗವನ್ನು ಸುಲೇಮಾನನಿಗೆ ಮಾರಿದಳು. ಮಾರಾಟದ ನಂತರ ಅವಳು ಸಮಸ್ಯೆಯಿಂದ ನುಣುಚಿಕೊಂಡಳು. ಸುಲೇಮಾನ್ ಸಿಕ್ಕಿ

ಹಾಕಿಕೊಂಡ. ಆದರೆ ಇಷ್ಟೆಲ್ಲಾ ನಡೆಯುವುದರೊಳಗೆ ಜೋಸೆಫ್ ಅಲ್ಲೊಂದು ಶೆಡ್ ಕಟ್ಟಿಸಿ, ಕಾಂಪೌಡು ಹಾಕಿಯೂ ಆಗಿತ್ತು. ಒಂದಿಷ್ಟು ದಿನ ತನ್ನ ಕೆಲಸದವರನ್ನು ಇಟ್ಟಿದ್ದ. ಸುಲೇಮಾನ್, ಬಹಳಷ್ಟು ದಿನ ಈ ಕಡೆ ತಲೆ ಹಾಕಿರಲಿಲ್ಲ. ಜೋಸೆಫ್ ತನ್ನ ಪಟ್ಟ ಭದ್ರವಾಯ್ತು ಅಂದುಕೊಂಡ. ಕೊನೆಗೊಂದು ದಿನ ಸುಲೇಮಾನ ಆ ಜಾಗ ಇನ್ಯಾರಿಗೋ ಮಾರಿ ಕೈ ತೊಳೆದುಕೊಳ್ಳಬೇಕೆಂದು ಪ್ರಯತ್ನ ಪಟ್ಟ. ಆದರೆ ಜೋಸೆಫ್ ಅಲ್ಲಿ ತನ್ನ ಅಧಿಕಾರ ಚಲಾಯಿಸಲು ತೊಡಗಿದುದರಿಂದ ಬಂದ ಗಿರಾಕಿಗಳು ಹಿಂದಿರುಗಬೇಕಾಯಿತು. ಸುಲೇಮಾನನ ಕಡೆಯವರು ರಾಜಿ ಪಂಚಾಯತಿಗೆ ಬಂದರು. ಸ್ಥಳ ಮಾರಿ ಅರ್ಧ ಅರ್ಧ ಹಂಚಿಕೊಳ್ಳೋಣ ಅಲ್ಲವಾದಲ್ಲಿ ಪ್ರಸಕ್ತ ಬೆಲೆ ನಿಶ್ಚಯಿಸಿ ಅದರಲ್ಲಿ ಅರ್ಧದಷ್ಟು ಇನ್ನೊಬ್ಬನಿಗೆ ಕೊಟ್ಟು ಸ್ಥಳದ ಹಕ್ಕು ಸ್ಥಾಪಿಸಿಕೊಳ್ಳುವುದು. ಆದರೆ ಜೋಸೆಫ್ ಒಪ್ಪಲಿಲ್ಲ. ಕೋರ್ಟಿನಲ್ಲಿದೆ ಕೇಸು,ಯಾವಾಗ ನಿರ್ಣಯ ಬರುತ್ತದೋ ಅಲ್ಲಿಯ ತನಕ ಕಾಯಬೇಕು. ತನ್ನ ಕೈ ತಪ್ಪಿ ಹೋದರೂ ಪರವಾಗಿಲ್ಲ, ಆದರೆ ಕೋರ್ಟಿನ ನಿರ್ಣಯವೇ ಮುಖ್ಯ. ಸುಲೇಮಾನ್‌ಗೆ ಮುಖ ಮುರಿದಂತಾಗಿ ಹಿಂತಿರುಗಿದ.

ಅನೇಕ ತಿಂಗಳುಗಳೇ ಉರುಳಿದವು. ಇದ್ದಕ್ಕಿದ್ದಂತೆ ಒಂದು ದಿನ ಸುಲೇಮಾನ ತನ್ನ ಕಡೆಯವರನ್ನು ಕರೆದುಕೊಂಡು ಬಂದು ಕಾಂಪೌಂಡು ಒಡೆದು ಶೆಡ್ಡಿನ ಬೀಗ ಮುರಿದು ಅಲ್ಲಿದ್ದ ಸಾಮಾನು ಹೊರಗೆ ಹಾಕಿ ತನ್ನಿಬ್ಬರನ್ನು ಅಲ್ಲಿಟ್ಟ. ಜೋಸೆಫ್‌ನ ದೂರು ಪೋಲಿಸ್ ಸ್ಟೇಷನಿಗೆ ಹೋಯಿತು. ಅಲ್ಲಿಂದ ಸುಲೇಮಾನನಿಗೆ ಕರೆಯೂ ಬಂತು. ತನ್ನ ಹೆಸರಿನಲ್ಲಿ ರಿಜಿಸ್ಟರ್ ಆದ ಕಾಗದದ ಪುರಾವೆ, ಜೋಸೆಫ್ ಆ ಜಾಗದಲ್ಲಿ ಕಾಲಿಡಲಾಗದಂತೆ ಮಾಡಿದ ತಡೆಯಾಜ್ಞೆಯ ಪ್ರತಿ ಎಸ್.ಐನ ಮುಂದಿಟ್ಟಾಗ ಅವನೂ ಬಾಯಿ ಬಿಡಲಾರದಾದ. ಜೋಸೆಫನೂ ತನ್ನ ಪುರಾವೆಗಳ ಪ್ರತಿ ಎಸ್. ಐನ ಮುಂದಿಟ್ಟಾಗ ಅವನು ಮೌನಿಯಾದ. ರಿಜಿಸ್ಟರ್ ದಾಖಲೆಇಬ್ಬರಲ್ಲೂ ಇದೆ. ಜೋಸೆಫ್ ಹಕ್ಕು ಸ್ಥಾಪನೆಗೆ ಕೋರ್ಟಿಗೆ ಹೋಗಿದ್ದರೂ ಇನ್ನು ಅವನ ಪಕ್ಷಕ್ಕೆ ತೀರ್ಮಾನ ದೊರೆತಿಲ್ಲ. ಆದರೆ ಸುಲೇಮಾನ ತಂದಿರುವ ತಡೆಯಾಜ್ಞೆ ಜೋಸೆಫ್ ಹಕ್ಕು ಸ್ಥಾಪಿಸುವುದರ ವಿರುದ್ಧವಾಗಿಯೇ ಇದೆ. ಎಸ್.ಐ ಯಾದರೂ ಏನು ಮಾಡಿಯಾನು? ಪರಿಸ್ಥಿತಿ ಇದ್ದ ಹಾಗೇ ಇರಬೇಕು ಎಂದು ಇಬ್ಬರಿಗೂ ನಿಷ್ಕರ್ಷೆ ಮಾಡಿ ಕಳುಹಿಸಿ, ಬೇಕಿದ್ದಲ್ಲಿ ಕೋರ್ಟಿನಲ್ಲಿ ಹೊಡೆದಾಡಿಕೊಳ್ಳಿ ಎಂದು ಹೇಳಿದ. ಅಂತೆಯೇ ಜೋಸೆಫ್ ಕೋರ್ಟಿಗೂ ಹೋದ. ಪುನಃ ಕೇಸಿನ ಮೇಲೆ ಕೇಸು.

ಮರುದಿನ ನಾನು ಅವನಿಗೆ ಫೋನು ಮಾಡುತ್ತೇನೆ.

"ಏನಾದ್ರು ಸಮಾಚಾರ ಇದೆಯಾ?"

"ನಥಿಂಗ್ ಸ್ಪೆಷಲ್, ನಥಿಂಗ್ ಸೀರಿಯಸ್"

"ಎಸ್.ಐ. ಹೇಳಿ ಕಳಿಸಿದ್ನಾ?"

"ಎರಡು ಬಾರಿ ಫೋನು ಮಾಡ್ದ. ಥೆರೆಸಾ ಫೋನು ಎತ್ಕೊಂಡು ಮದ್ರಾಸಿನಿಂದ ಇನ್ನೂ ಬಂದಿಲ್ಲ ಅಂದ್ಲು. ಪೋಲಿಸ್‌ನವರು ತಿರುಗುತ್ತಾ ಇದ್ದಾರೆ. ಯಾಕೆ ಎಂದು ತಿಳಿದಿಲ್ಲ ಗಲಾಟೆ ಆಗದ ಹಾಗೆ ನೋಡಿಕೊಳ್ಳಲಿಕ್ಕೋ ಏನೋ"

"ಬೈಲ್ ವಿಚಾರ ಏನಾಯ್ತು?"

" ಇವತ್ತು ಸಂಜೆ ಗೊತ್ತಾಗಬಹುದು. ನಾಳೆ ಸಿಕ್ಕಿದ್ರೂ ಸಿಗಬಹುದು. ಅದು ಸಿಕ್ಕಿದ ಮೇಲೆ ಹೋಗ್ಬಹುದು"

"ಆದ್ರೂ ಒಂದು ಕೆಲ್ಸ ಮಾಡು. ನಾವ್ಯಾರಾದ್ರು ಜೊತೇನಲ್ಲಿ ಬರ್ಬಹುದು. ಆದ್ರೂ ಆ ಆ್ಯಕ್ಟು ಈ ಆ್ಯಕ್ಟು ಅಂತ ಏನಾದ್ರೂ ದಬಾಯಿಸ್ಬಿಹುದು. ನಿನ್ನ ವಕೀಲರನ್ನು ಕರ್ಕೊಂಡು ಹೋಗು, ಆಗ ಎಸ್.ಐ. ಬಾಲ ಬಿಚ್ಚಲಾರ"

"ಹಾಗೇ... ಮಾಡೋಣ"

ನಾನು ಎಷ್ಟೋ ಬಾರಿ ಈ ಜೋಸೆಫನಿಗೆ ಹೇಳಿದ್ದೆ ಇಷ್ಟೊಂದು ಎಗ್ರೆಸಿವ್ ಆಗಿರಬಾರದು ಎಂದು. ಇಂದಲ್ಲ ನಾಳೆ ಕೋರ್ಟಿನ ತೀರ್ಮಾನ ಬರಬಹುದು ಇಷ್ಟು ವರ್ಷ ಕಳೆದವನಿಗೆ ಈಗ ಯಾಕೆ ಇಷ್ಟೊಂದು ಅವಸರ! ಸುಲೇಮಾನನ ಕಡೆಯವರು ಅಲ್ಲಿ ಬಂದು ಇದ್ದದ್ದು ಅವನಿಗೆ ಕಣ್ಣು ಕಾಯುತ್ತದೆ. ಅಷ್ಟಲ್ಲದೆ ಬಂದವರು ಇವನು ನೆಟ್ಟು, ಬೆಳೆಯಿಸಿದ ಗಿಡಗಳನ್ನು ಕಡಿದುದು ಇವನ ಕೋಪಕ್ಕೆ ಆಜ್ಯ ಎರೆದಂತಾಗಿದೆ. ಏನಾದರೂ ಮಾಡಿ ಅವರನ್ನು ಅಲ್ಲಿಂದ ಎಬ್ಬಿಸಲೇ ಬೇಕೆಂಬ ಹಠ. ಒಂದು ದಿನ ಇದ್ದಕ್ಕಿದ್ದಂತೆ ಯಾರ ಸಲಹೆಯೂ ಕೋರದೆಯೇ ರಿಜಿಸ್ಟ್ರಾರ್ ಆಫೀಸಿಗೆ ಹೋದ. ಅಲ್ಲಿ ತನ್ನ ರಿಕಾರ್ಡ್‌ಗಳನ್ನೆಲ್ಲಾ ತೋರಿಸಿ ಅದೇನೋ ಮಾಡಿ ಜಯಂತಿಯ ಬಳಿಕ ಸುಲೇಮಾನನ ಹೆಸರಿನಲ್ಲಿದ್ದ ರಿಜಿಸ್ಟ್ರಿಯನ್ನು ವಜಾ ಮಾಡಿಸಿಕೊಂಡು ಬಂದ. ಇನ್ನು ಮೇಲೆ ಈ ಜಾಗದ ಅಧಿಕಾರ ತನಗೆ ಮಾತ್ರ ಎಂದು ಸಂತೋಷವೂ ಪಟ್ಟ. ಎಸ್.ಐ.ಗೆ ಹೇಳಿದ ಹೇಳಿಸಿದ ಅಲ್ಲಿರುವವರನ್ನು ಖಾಲಿ ಮಾಡಿಸಬೇಕು. ತನ್ನ ಸ್ವಂತದ ಜಾಗ ಅದು ಎಂದು ಆದರೆ ಎಸ್.ಐ. ಅದರಂತೆ ನಡೆಯಲು ಒಪ್ಪಿಕೊಳ್ಳಲಿಲ್ಲ. ಸದ್ಯಕ್ಕೆ ಯಾವ ಗಲಾಟೆಯೂ ಇಲ್ಲದಿದ್ದಲ್ಲಿ ಅವನಿಗೆ ಅದೇ ಸಾಕಾಗಿದೆ.

ಈ ನಡುವೆ ಇನ್ಯಾರೋ ಅವನಿಗೆ ಹೇಳಿಕೊಟ್ಟಿರಬೇಕು. ಡಿ.ಪಿ.ಸಿ. ಅಂತ ವಿಜಯನಗರದಲ್ಲಿದೆ, ಅವರು ಎಲ್ಲಾದರೂ ಅನ್ಯಾಯ ಕಂಡು ಬಂದಲ್ಲಿ ಅದರ ವಿರುದ್ಧ ಹೋರಾಡಲು ತಯಾರಾಗಿದ್ದಾರೆ ಎಂದು. ಸರಿ ಅಲ್ಲೂ ಹೋಗಿ ಅವರನ್ನು ಮಾತನಾಡಿಸಿ ತನ್ನ ಕೇಸು ಹೇಳಿ ಬಂದ, ಅವರನ್ನು ಒಪ್ಪಿಸಿಯೂ ಬಂದ. ದಿನಕ್ಕಾಗಿ ಕಾಯ ತೊಡಗಿದ. ಈ ನಡುವೆ ಎಸ್.ಐ.ಗೆ ನನ್ನ ಮೂಲಕ ಈ ವಿಚಾರ ತಿಳಿಸಿದ. ಗಲಾಟೆ ಮಾಡಿಕೊಂಡು ಅನ್ಯಾಯ ಮಾಡದಿದ್ದರೆ ಸರಿ ತನ್ನ ಬೆಂಬಲವಿದೆ ಅಂದ. ಸರ್ಕಲಿಗೆ ಇನ್ನೊಬ್ಬರ ಮೂಲಕ ಹೇಳಿಸಿದ. ಕಮಿಷನರ್ ಅಫೀಸಿಗೂ ಹೇಳಿ ಬಂದ.

ಅಲ್ಲಿಂದಲೂ ಆಶ್ವಾಸನೆ ಬಂತು. ಹೋಂ ಸೆಕ್ರೆಟರಿಗೆ ಹೋಗಿ ಹೇಳಿದ. ಮೊದಲೇ ಪರಿಚಯವಿದ್ದ ಅವರೂ ತಡೆ ಮಾಡಲಿಲ್ಲ. ಇನ್ನೇನು ತನ್ನ ರೊಟ್ಟಿ ತುಪ್ಪಕ್ಕೆ ಬಿದ್ದಂತೆ ಎಂದಾಗ ನಿನ್ನೆಯ ದಿನದ ತನಕ ಕಾದ. ನಿನ್ನೆ ಡಿ.ಪಿ.ಸಿ.ಯವರನ್ನು ಕರೆದುತಂದು ನಿನ್ನೆ ಹಾಗೆ ಮಾಡಿಯೂ ಆಯ್ತು. ಆದರೆ ಅದು ಹೀಗೆ ಅದು ತಿರುಗೀತೆಂದು ಯಾರೂ ಅಂದು ಕೊಂಡಿರಲಿಲ್ಲ.

ಆ ದಿನವೂ ಹಾಗೆಯೇ ಕಳೆಯಿತು. ಮರುದಿನ ಕೋರ್ಟಿನಿಂದ ಜಾಮೀನು ಪತ್ರ ಕೈಗೆ ಬಂತು. ಅದು ಬಂದೊಡನೆ ತಾನೇ ಪೋಲಿಸು ಸ್ಟೇಷನಿಗೆ ಫೋನು ಮಾಡಿ ಮುನಿಯಪ್ಪನವರನ್ನು ಮಾತನಾಡಿಸಿದ. ಮುನಿಯಪ್ಪ ಹೆಚ್ಚೇನೂ ಮಾತನಾಡಲಿಲ್ಲ. ಮಧ್ಯಾಹ್ನ ಎರಡು ಗಂಟೆಗೆ ಕಮಿಷನರ್ ಆಫೀಸಿಗೆ ಬರ ಹೇಳಿದ. ಹಾಗೆಯೇ ಮಧ್ಯಾಹ್ನ ಒಂದೂವರೆ ಗಂಟೆಗೆ ಜೋಸೆಫ್ ಅವನ ಲಾಯರ್, ಸೆಕ್ರೆಟರಿ ತ್ಯಾಗರಾಜು, ಡಿ.ಪಿ.ಸಿ.ಯ ಚಂದ್ರು, ನಾನು ಎಲ್ಲಾ ಅಲ್ಲಿಗೆ ಹೋದೆವು. ಸುಲೇಮಾನನ ಕಡೆಯವರ ವಿಚಾರಣೆ ಆಗಿತ್ತೊ ನಮಗೆ ತಿಳಿಯದು. ಅಲ್ಲಿ ಕಮಿಷನರ್ ಜೊತೆಗೆ ಸರ್ಕಲ್ ಮತ್ತು ಎಸ್.ಐ. ಕೂಡಾ ಇದ್ದರು. ನಾವು ಒಳಗೆ ಹೋದೊಡನೆ ನಮಗೇನು ಸ್ವಾಗತ ಸಿಗಲಿಲ್ಲ. ನಾವದನ್ನು ಅಪೇಕ್ಷಿಸಿಯೂ ಇಲ್ಲ. ಕಮಿಷನರ್, ಸರ್ಕಲ್ ಬಿಗಿಯಾಗಿಯೇ ಇದ್ದರು.

ಕುಳಿತುಕೊಳ್ಳಲೂ ಹೇಳಲಿಲ್ಲ. ನಾವು ಒಬ್ಬೊಬ್ಬರಾಗಿ ಪರಿಚಯ ಹೇಳಿಕೊಂಡೆವು. ಲಾಯರ್ ವೆಂಕಟಾಚಲಯ್ಯ ಎಂದೊಡನೆ ನಮಗೆ ಕುಳಿತುಕೊಳ್ಳಲು ಕುರ್ಚಿ ಸಿಕ್ಕಿತು, ಚಂದ್ರುವನ್ನು ಕಂಡೊಡನೆ ಅವರ ಮುಖ ವಿವರ್ಣವಾಯ್ತು.

ಸರ್ಕಲ್ "ಏನ್ರೀ, ಗೂಂಡಾಗಿರಿ ಸುರು ಮಾಡಿ ಬಿಟ್ಟಿದ್ದೀರಿ. ನಿಮ್ಮ ಮೇಲೆ ಫಿರ್ಯಾದು ಬಂದಿದೆ".

"ನನ್ಗೆ ತಿಳಿದ ಹಾಗೆ ನಾನೇನೂ ಗೂಂಡಾಗಿರಿ ಮಾಡಿಲ್ಲ. ಗೂಂಡಾಗಿರಿ ಮಾಡಿದವ್ರು ಸುಲೇಮಾನ್ ಕಡೆಯವ್ರು. ಹಿಂದೆ ಅವ್ರು ಬಂದು ಕಾಂಪೌಂಡು ಒಡೆದು ಬೀಗ ಒಡೆದಾಗ ಕಂಪ್ಲೈಂಟ್ ಇತ್ತಿದ್ದೆ. ನೀವೇನು ಆ್ಯಕ್ಷನ್ ತಕ್ಕೊಂಡ್ರಿ?"

"ರೀ, ನಿಮ್ಮ ಕಾನೂನು ಇಲ್ಲಿ ನಡೆಯೋಲ್ಲ"

"ನನ್ನ ಕಾನೂನು ನಡೆಯೋಲ್ಲ ಅಂತಾನೆ ನಮ್ಮ ಲಾಯರು ಬಂದಿರೋದು"

ವೆಂಕಟಾಚಲಯ್ಯನವರು," ಮೊದ್ಲಾಗಿ ಇಲ್ಲಿ ಯಾವ ಗೂಂಡಾಗಿರಿಯೂ ನಡ್ದಿಲ್ಲ. ಅಲ್ಲಿದ್ದ ಕೂಲಿಯಾಳು ಹೊರಟು ಹೋಗಿದ್ದಾನೆ. ಡಿ.ಪಿ.ಸಿ. ಯವರಿಗೆ ಅದನ್ನು ಬಾಡಿಗೆ ಕೊಟ್ಟಿದೆ. ಅದರಿಂದ್ಲೇ ಅವರು ಬಂದಿದ್ದು"

"ಡಿ.ಪಿ.ಸಿ. ಯವ್ರಿಗೂ ಇದಕ್ಕೂ ಏನು ಸಂಬಂಧ"

"ಬಾಡಿಗೆಗೆ ತಕ್ಕೊಂಡ ಮೇಲೆ ಇನ್ನೇನು ಸಂಬಂಧ ಬೇಕು, ಜೋಸೆಫರು ಅಂದು ಅಲ್ಲಿ ಇರಲೂ ಇಲ್ಲ".

"ಯಾವತ್ತು ಬಾಡಿಗೆ ಕೊಟ್ಟಿದ್ದು"

"ಮೂರು ದಿನಗಳ ಹಿಂದೆ"

"ಅಲ್ಲಿ ತಡೆಯಾಜ್ಞೆ ಇದ್ದು ಬಾಡಿಗೆ ಕೊಟ್ಟಿದ್ದು ಹ್ಯಾಗೆ? ಕೋರ್ಟಿನ ಆಜ್ಞೆಗೆ ಅವಮಾನ ಮಾಡಿದ ಹಾಗಾಯ್ತು"

"ಅದನ್ನು ಕೋರ್ಟಿನಲ್ಲಿ ನೋಡಿಕೊಳ್ಳೋಣ"

ಚಂದ್ರುವನ್ನು ತೋರಿಸಿ " ಈ ಗೂಂಡಾಗಳನ್ನು ಕರ್ಕೊಂಡು ಬಂದು ಗಲಾಟೆ ಮಾಡ್ಸಿದ್ದೆ ಎಲ್ಲರನ್ನು ಅರೆಸ್ಟ್ ಮಾಡ್ಬೇಕಾಗ್ತದೆ"

ಅಷ್ಟು ಹೊತ್ತು ಸುಮ್ಮನಿದ್ದ ಚಂದ್ರು "ಯಾವನೋ ಗೂಂಡಾ? ನೋಡ್ಕೊಂಡು ಮಾತಾಡು. ಅರೆಸ್ಟ್ ಮಾಡ್ತಾನಂತೆ ಅರೆಸ್ಟು. ಮಾಡು ನೋಡೋಣ ಎಷ್ಟಿದೆ ನಿಂಗೆ ತಾಕತ್ತು"

"ಮರ್ಯಾದೆ ಕೊಟ್ಟು ಮಾತಾಡೋ ಹಲ್ಕಾ ನನ್ಮಗನೇ, ಜಾಸ್ತಿ ಮಾತನಾಡಿದ್ರೆ ಸುಟ್ಟು ಬಿಟ್ಟೇನು"

"ನಿನ್ನ ಅಮ್ಮನ ಪಿಂಡ ಸುಡೋದಕ್ಕೆ, ಗೂಂಡಾ ಅಂತ ಕರೆದು ನೀನೇನು ಮರ್ಯಾದೆ ಕೊಟ್ಟೆ? ನಿಂಗೆ ಮಾತ್ರ ಮರ್ಯಾದೆ ಬೇಕಾ? ನಾಳೇನೇ ಈ ಸರ್ಕಲ್ ವಿರುದ್ಧ ಕಮಿಷನರ್ ವಿರುದ್ಧ ಧರಣಿ ಮಾಡ್ತೀನಿ, ಇವರನ್ನು ಕಿತ್ತು ಹಾಕ್ಬೇಕೂಂತಾ, ಟ್ರಾನ್ಸ್‌ಫರ್ ಮಾಡ್ಬೇಕೂಂತಾ. ಅವನು ಯಾವನೋ ಮಿನಿಸ್ಟ್ರು ಹೇಳ್ದಾ ಅಂತ ಇವರು ಕುಣೀತಾ ಇದ್ದಾರೆ. ಅವನ ವಿರುದ್ಧನೂ ಧರಣಿ ಹಾಕ್ತೀವಿ. ಇನ್ನೇನು ಇಲೆಕ್ಷನ್ ಬರ್ತಾ ಇದೆ. ಒಂದ್ಸಲ ಧರಣಿ ಹಾಕಿದ್ರೆ ಅವನು ಸೋತು ಹೋಗೋದು ಖಂಡಿತ. ಆ ಮ್ಯಾಲೆ ಆ ಮಿನಿಸ್ಟ್ರು ಅವನ ಚೇಲಾ ಈ ಪೋಲೀಸ್ನೋರು ನಾಯಿ ಹಂಗ ಬಾಲ ಅಲ್ಲಾಡಿಸ್ಕೊಂಡು ಇರ್ಬೇಕು".

ಜೋಸೆಫ್‌ನ ಕಡೆ ತಿರುಗಿ. “ಬನ್ನಿ ಸಾರ್ ಹೋಗೋಣ ಈ ಪೋಲಿಸ್ನೋರು ಏನು ಕಿತ್ಕೊಳ್ತಾರಾ ಕಿತ್ಕೊಳ್ಳಿ ನೋಡೋಣ. ನಿಮ್ಮ ಮಾತು ಕೇಳೋದು ಬಿಟ್ಟು ಫೈಲು ನೋಡೋದು ಬಿಟ್ಟು ಗದರಾಕೆ ಬಂದವ್ನೆ”.

ಅವನ ಹಿಂದೆ ಅವನ ಸಂಘ, ಸಂಘಟನೆ, ಜಾತಿ, ಸರಕಾರಗಳ ಶಕ್ತಿ ಮಾತನಾಡುತ್ತಿದೆ ಎನ್ನುವುದಂತೂ ಸತ್ಯ. ಈ ತನಕ ಏನೂ ಮಾತನಾಡದೆ ಸುಮ್ಮನಿದ್ದ ಕಮಿಷನರ್ “ಇರಪ್ಪ ಕೋಪ ಮಾಡ್ಕೋಬೇಡ, ಕೂತ್ಕೋ ನಿಧಾನವಾಗಿ ಮಾತ್ನಾಡೋಣ” ಎಂದು ಚಂದ್ರುವನ್ನು ಶಾಂತಿಗೊಳಿಸಲು ಪ್ರಯತ್ನಿಸುತ್ತಾರೆ. ಆತನಕ ಮಾತನಾಡಿ ಅನ್ನಿಸಿಕೊಂಡ ಸರ್ಕಲ್‌ನ ಮುಖದಲ್ಲಿ ಬೆವರಿಳಿಯುತ್ತದೆ.

ಪೆಚ್ಚಾದ ಅವನು ಮುಂದೆ ಬಾಯಿ ತೆರೆಯಲೇ ಇಲ್ಲ.

“ನಾಳೆ ನಿಮ್ಮ ಆಫೀಸು ಮುಂದೆ ನೋಡೋಣ ಸಾರ್” ಚಂದ್ರು ಹೇಳುತ್ತಾನೆ.

“ತಾಳಪ್ಪ ಯಾಕೆ ಅವಸರ”,

ವೆಂಕಟಾಚಲಯ್ಯನ ಕಡೆ ತಿರುಗಿ “ನೋಡಿ ಲಾಯರ್ರೇ, ಯಾಕೆ ಸುಮ್ಮನೆ ಜಗಳ. ನಮ್ಮ ಕೆಲಸ ನಾವು ಮಾಡ್ಬೇಕು. ಹೆಲ್ತ್ ಮಿನಿಸ್ಟರ್ ಕಡೆಯಿಂದ ಫೋನು ಬಂದಿತ್ತು. ಎಂಕ್ವಯರಿ ಮಾಡ್ಬೇಕಾದ್ದು ನಮ್ಮ ಡ್ಯೂಟಿ ತಾನೇ”,

“ಅದು ಸರಿ ಸಾರ್. ಆದ್ರೆ ಅರೆಸ್ಟು ಮಾಡ್ತೇನೆ ಸುಟ್ಟು ಹಾಕ್ತೇನೆ ಈ ಬೆದರಿಕೆ ಎಂಕ್ವಯರಿ ಅಲ್ಲ ತಾನೆ. ನಮ್ಮ ಫೈಲು ನೋಡಿದ್ದೀರಾ ನೀವು? ಸುಮ್ನೆ ಸುಮ್ನೆ ಗದ್ರಿಸೋದು ಸರಿಯಲ್ಲ”

“ಕೊಡಿ, ಕೊಡಿ ನಿಮ್ಮ ಫೈಲು, ನಾನು ಓದಿ ನೋಡ್ತೇನೆ. ಆ ಫೈಲು ನೋಡಿಯಾಯ್ತು, ನಾಳೆ ನಾಡಿದ್ದಿನಲ್ಲಿ ನಾನೇ ಫೋನು ಮಾಡ್ತೇನೆ. ಆದ್ರೆ ಒಂದು ವಿಚಾರ ಅಲ್ಲಿ ಯಾವ ರೀತಿ ಗಲಾಟೇನೂ ಆಗ ಕೂಡದು. ಆದ್ರೆ ನಾನು ಆ್ಯಕ್ಷನ್ ತಗೋ ಬೇಕಾಗುತ್ತೆ”.

“ಗಲಾಟೆ ಆಗ್ದೇ ಇರೋ ತರಹ ನೋಡಿಕೊಳ್ಳೋ ಜವಾಬ್ದಾರಿ ನನ್ನದು” ಜೋಸೆಫ್ ಉತ್ತರಿಸುತ್ತಾನೆ.

“ಏನು ಹೇಳ್ತೀರಿ ಲಾಯರ್ರೇ?”

“ಜಗಳ ಯಾರಿಗೂ ಬೇಡ. ನಾಳೆ ಸುಲೇಮಾನನ ಕಡೆಯವ್ರು ಬಂದು ಗಲಾಟೆ ಮಾಡಿದ್ರೆ ಆಗ?”

“ಈಗ ಇರೋ ಪೊಸಿಷನ್ ಹಾಗೇ ಇರಲಿ. ಒಡೆಯೋದು ಕಟ್ಟೋದು ಏನೂ ಬೇಡ. ಅವನ ಕಡೆಯವ್ರು ಬರದಂತೆ ನಾನು ನೋಡ್ಕೋತೀನಿ. ಅಲ್ಲದೆ ಈ ಡಿ.ಪಿ.ಸಿ.ಯವ್ರಿಗೆ ಆಫೀಸು ಅಲ್ಲಿ ಕೊಟ್ಟಿದೆ ಅನ್ತೀರಿ. ಅದನ್ನು ಮಾತ್ರ ಕ್ಯಾನ್ಸಲ್ ಮಾಡ್ಸಿ. ವಿಜಯನಗರದಿಂದ ಇಷ್ಟು ದೂರ ಬಂದು ಆಫೀಸು ಇಟ್ಕೊಳ್ತಾರೆ ಅಂದ್ರೆ ಸತ್ಯಕ್ಕೆ ದೂರವಾಗ್ತದೆ”.

ಜೋಸೆಫ್ ಚಂದ್ರುವಿನ ಮುಖ ನೋಡುತ್ತಾನೆ. ಪರವಾಗಿಲ್ಲ, ಎಂಬ ಸೂಚನೆ ಅವನಿಂದ ಬರುತ್ತದೆ.

“ಹಾಗೇ ಆಗಲಿ” ಎನ್ನುತ್ತಾನೆ ಜೋಸೆಫ್

ಕಮಿಷನರ್ ಎದ್ದು ಎಲ್ಲರ ಕೈ ಕುಲುಕಿ ಬೀಳ್ಕೊಡುತ್ತಾರೆ. ಮುಖ ಊದಿಸಿಕೊಂಡ ಸರ್ಕಲ್ ಎದ್ದೇಳುವುದೂ ಇಲ್ಲ. ಎಸ್.ಐ. ಇವರೊಡನೆ ಹೊರಗ ಬರುತ್ತಾನೆ.

ಹೊರ ಬಂದ ಜೋಸೆಫ್ ಮುನಿಯಪ್ಪನವರೊಡನೆ "ಸಾರ್, ನಿಮ್ಮ ಹೆಸರು ಅವರ ಜೊತೆ ಸೇರಿಸೋಲ್ಲ. ಡಿ.ಪಿ.ಸಿ. ಯವರಿಗೆ ಹೇಳಿದ್ದೇನೆ, ನೀವು ಮೊದ್ಲಿನಿಂದ್ಲೂ ನಂಗೇ ಅನುಕೂಲವಾಗಿದ್ರಿ ಎಂದು. ತಾವು ಬೇಜಾರು ಮಾಡೊಕ್ಕೊಳ್ಳೋದು ಬೇಡ"

"ಥ್ಯಾಂಕ್ಯೂ"

ಚಂದ್ರು ಜೋಸೆಫರೊಡನೆ "ನೀವೇನೂ ಭಯ ಬೀಳ್ಬೇಡಿ ಸಾರ್, ನಾವು ಒಂದ್ಸಲ ಕೈ ಇಕ್ಕಿದ್ವು ಅಂದ್ರೆ ಕೊನೇ ತನಕಾ ಬಿಡಾಕ್ಕಿಲ್ಲ ಸಾರ್, ನಾವು ಸುಮ್ಮೆ ಸುಮ್ಕೆ ಗಲಾಟೆ......" ವೆಂಕಟಾಚಲಯ್ಯ "ಕೋರ್ಟಿನಲ್ಲಿ ಕೇಸು ಗೆಲ್ಬಹುದು ಅದಕ್ಕೇನೂ ಸಂಶಯ ಇಲ್ಲ. ಅದ್ರೂ ನಾಲ್ಕು ದಿನ ಕಳೀಬಹುದು."

"ಸದ್ಯಕ್ಕಂತೂ ನಿನ್ನ ಜಾಮೀನು ಉಪಯೋಗಕ್ಕೆ ಬರ್ಲಿಲ್ಲ. ಆದ್ರೂ ನೀನು ಕೊಂಚ ತಲೆ ಉಪಯೋಗಿಸ್ಬೇಕಿತ್ತು. ಆ ತಡೆಯಾಜ್ಞೆ ಮೊದಲೇ ಕ್ಯಾನ್ಸಲ್ ಮಾಡ್ಬೇಕಿತ್ತು. ಏನೋ ಚಂದ್ರು ಗುಡುಗಾಡಿದ್ದಕ್ಕೆ ಎಲ್ಲಿಂದ ಎಲ್ಲಿಗೋ ತಿರುಗಿತು. ಇಲ್ಲೇ ಇದ್ರೆ ಕಷ್ಟ ಇತ್ತು" ಅನ್ನುತ್ತೇನೆ ನಾನು.

"ಎರಡು ದಿನ ಬಿಟ್ಟು ಅಲ್ಲಿ ಒಬ್ಬನ್ನ ಬಾಡಿಗೆಗೆ ಇಡ್ತೇನೆ. ಕಾಂಪೌಂಡು ಕಟ್ಟಿಸಿ ಗೇಟು ಹಾಕಿಸ್ತೇನೆ. ಹಿಂದಿನಿಂದ ಒಂದು ಬಾತ್ ರೂಂ ಕಟ್ಟಿಸ್ತೇನೆ" ಎಂದ ಜೋಸೆಫ್. ಎಲ್ಲರೂ ಅವನ ಮುಖ ನೋಡುತ್ತಾರೆ.

ನಾಲ್ಕು ದಿನದಲ್ಲಿ ಹಾಗೆ ಮಾಡಿಯೂ ಮಾಡಿದ. ಸುಲೇಮಾನನ ಕಡೆಯವರ ಗಲಾಟೆಯೂ ಇಲ್ಲ. ಜೋಸೆಫ್ ಗೆದ್ದ.

ಒಂದು ವಾರದ ಬಳಿಕ ಒಂದು ರಾತ್ರಿ ಜೋಸೆಫ್‌ನ ಫೋನು ಬರುತ್ತದೆ. " ರೀನಾ ಸ್ಕೂಲಿನಿಂದ ಬರ್ತಿರೋವಾಗ ಮೋಟಾರ್ ಬೈಕು ಆ್ಯಕ್ಸಿಡೆಂಟ್ ಆಗಿ ಕಾಲು ಫ್ರಾಕ್ಚರ್ ಆಗಿ ಆಸ್ಪತ್ರೆಯಲ್ಲಿದ್ದಾಳೆ" ನಾನೂ ಆಸ್ಪತ್ರೆಗೆ ನನ್ನ ಕಾರು ಸ್ಟಾರ್ಟ್ ಮಾಡಿ ಹೊರಡುತ್ತೇನೆ. ತಲೆಯಲ್ಲಿ ಮಾತ್ರ ಇನ್ನೊಂದು ಆಲೋಚನೆ. ಆ್ಯಕ್ಸಿಡೆಂಟೋ ಅಥವಾ ...... ಮರುದಿನ ಗುಡ್‌ಫ್ರೈಡೇ.

## ಶ್ರೀ ಶ್ರೀಧರ ಸ್ವಾಮಿಗಳ ಭಾದೂಷ ಆಸೆ.

ವರದಹಳ್ಳಿ ಸಾಗರಕ್ಕೆ ಕೆಲವೇ ಕಿಲೋ ಮೀಟರ್ ದೂರದಲ್ಲಿದೆ ಇದು ಮಹಾ ತಪಸ್ವಿ ಶ್ರೀ ಶ್ರೀಧರ ಸ್ವಾಮಿಗಳು ತಮ್ಮ ಏಕಾಂತಕ್ಕೆ ಅಂದರೆ ತಪಸ್ಸಿಗಾಗಿ ಆರಿಸಿಕೊಂಡಿದ್ದ ಜಾಗ. ಈಗಲೂ ಈ ತಾಣ ಸಾಧಕರ ತಪಸ್ಸಿಗೆ ಯೋಗ್ಯವಾದ ಜಾಗ. ಎಲ್ಲೆಲ್ಲೂ ಹಸಿರು ಕಂಗೊಳಿಸುತ್ತಾ ಪ್ರಕೃತಿ ಸುಂದರವಾಗಿದೆ. ಒಳ್ಳೆಯ ಎತ್ತರ ಪ್ರದೇಶದಲ್ಲಿದೆ. ಶ್ರೀ ಶ್ರೀಧರ ಸ್ವಾಮಿಗಳಿಗೆ ಭಾದೂಷ ಸಿಹಿ ತಿಂಡಿ ಎಂದರೆ ಬಹಳ ಇಷ್ಟವಂತೆ. ಅವರು ಈ ತಿನ್ನುವ ಚಪಲವನ್ನು ಬಿಡುವುದಕ್ಕಾಗುವುದಿಲ್ಲವೇ ಎಂದು ಅನೇಕ ಬಾರಿ ಯೋಚಿಸಿದರಂತೆ. ಕಡೆಗೆ ಒಂದು ದಿವಸ ಬೇವಿನ ಸೊಪ್ಪನ್ನು ತರಿಸಿ. ಅದರೊಡನೆ ಭಾದೂಷ ತಿನ್ನಲು ಶುರು ಮಾಡಿದರಂತೆ. ಅಂದಿನಿಂದ ಸ್ವಲ್ಪ ಸ್ವಲ್ಪವಾಗಿ ಭಾದೂಷ ಆಸೆ ಕಡಿಮೆ ಆಯಿತಂತೆ. ಎಲ್ಲರೂ ಈ ರೀತಿ ಮಾಡಿ ಬಾಯಿ ಚಪಲ ಕಡಿಮೆ ಮಾಡಿಕೊಳ್ಳಲು ಸಾಧ್ಯವೆ? ಅದು ಶ್ರೀ ಶ್ರೀಧರ ಸ್ವಾಮಿಗಳಂತ ಮಹಾತ್ಮರಿಗೆ ಸಾಧ್ಯ.

**ಸಂಗ್ರಹ : ಜಿ. ಕೆ. ಎಲ್. ರಾಜನ್**

**ಕವಿತೆ**

# ಪ್ರಿಯಕರನೊಡನೆ ವಿಹಾರ

ಪಯಣವಿದು
ಕೊಟಚಾದ್ರಿ ಚಾರಣಕೆ
ವಾಹನ ಗರ್ಭದೊಳಗಿಂದ
ಇಳೆಗಿಳಿದಾಗ
ಬುಡದಿಂದ ಶಿಖರಕ್ಕೆ
ಒಂಟಿಯಲ್ಲದ ಒಂಟಿ ಪಯಣ
ಶಿಖರದಿಂದ ಶಿಖರಕ್ಕೆ
ಮುಂದಕ್ಕೆ !

ಜೊತೆ ಸೇರುವರು ಚಾರಣರು
ಹಲವರು
ತೆರಳುವರು ಅನ್ಯರು
ಶಿಖರ ತುದಿಯಲಿ
ಮತ್ತೆ ಒಬ್ಬಂಟಿ

ಗಿಡ ಪೊದೆಗಳ ಸರಿಸಿ
ದಾರಿಯಲ್ಲದ ದಾರಿಸವೆಸಿ
ಮೈಯೆಲ್ಲಾ ಮುಳ್ಳಲ್ಲಿ ಪರಚಿಸಿ
ರಕ್ತ ಹರಿಸಿದಾಗ
ಉಂಬ ಬರುವ ಇಂಬಳಗಳು
ಕತ್ತೇರಿಸಿ ಬರುವ
ಕತ್ತೆ ಕಿರುಬಗಳು
ಸುತ್ತು ಬರುವ
ಸೀಳು ನಾಯಿಗಳು

ಆರಂಭದ ಬಾಲ
ರವಿಯ ಹುಮ್ಮಸ್ಸಿನಲಿ
ಓಡೋಡಿ
ಬೆಟ್ಟ ಕಣಿವೆಗಳ ಏರಿ
ಹಾವು ಚೇಳುಗಳ ಹಿಂದಿಕ್ಕಿ
ಸೂರ್ಯ ನಡುನೆತ್ತಿ ಗೇರಿದಂತೆ
ಬಸವಳಿದು
ಅತ್ತಿತ್ತ ಕಣ್ಣು ಹಾಯಿಸಿದಾಗ
ಎದೆಯೊಳಗೊಂದು
ಭಯದ ಕೋಲ್ಮಿಂಚು
ಸುಳಿದು ಮಾಯವಾಗುತ್ತದೆ
ಮುಂಬರಲಿರುವ
ಸಂಜೆಗತ್ತಲಿನ
ಕರಡು ನಕ್ಷೆ ಅರಸಿ

ಪಂಗಡಗಳೊಂದೊಂದಾಗಿ
ಮರೆಯಾಗಿ
ಕತ್ತಲಾವರಿಸುತ್ತಿದ್ದಂತೆ
ಕಲ್ಲು ಮುಳ್ಳುಗಳ
ಗಾಯ ಅಧಿಕವಾಗಿ
ಕೀಟ ಪ್ರಾಣಿಗಳ ಕಾಟ ವೃದ್ಧಿಸಿ
ಪಂಗಡಗಳೊಳಗಿನವರೂ
ಕತ್ತಲಿನಲಿ ಕರಗುತ್ತಾರೆ

ಶಿಖರ ಏರಿದ ಸಂಭ್ರಮದಲಿ
ಸಿಂಹಾವಲೋಕನ ಮಾಡಿದಾಗ
ಕತ್ತಲಿನಲಿ
ಒಬ್ಬಂಟಿಯಾದ ಕಟುಸತ್ಯದ
ಅರಿವಾಗುತ್ತದೆ
ಹೊಸ ಸಂಗಾತಿಯ
ವ್ಯರ್ಥಾನ್ವೇಷಣೆ ಮಾಡಿ
ಮೇಲುಸಿರು ಬಿಡುತ್ತಾ
ಮುಂದಡಿ ಇಟ್ಟಾಗ
? ? ?

- ಆರ್. ಆರ್. ಪಾಂಗಾಳ

# ಹಿರಿಯರು ಬದುಕಿ ತೋರಿದ ದಾರಿ

**- ಕೋಟೇಶ್ವರ ಸೂರ್ಯನಾರಾಯಣ ರಾವ್**

ರಾಮಕೃಷ್ಣ ಪರಮ ಹಂಸರ ಬೇಲೂರು ಮಠದ ಸ್ವಾಮಿ ಸುಬೋಧಾನಂದರು ಒಮ್ಮೆ ಬೇಲೂರು ಮಠದಿಂದ ಕಲಕತ್ತಗೆ ಬೋರ್ಡ್‌ನಲ್ಲಿ ಪ್ರಯಾಣಿಸುತ್ತಿದ್ದರು. ಆಂಗ್ಲರ ಕಾಲ-ಇಂಡೋನೇಷ್ಯಾದ ಬಾಲಿಯಿಂದ ಬಂದಿದ್ದ ನಾಲ್ಕಾರು ಯುವಕರು -ಬೇಲೂರು ಮಠ ಹಾಗೂ ಸ್ವಾಮಿ ವಿವೇಕಾನಂದರನ್ನು ಧಾರಾಳವಾಗಿ ನಿಂದಿಸುತ್ತಿದ್ದರು. ಸ್ವಲ್ಪ ಹೊತ್ತು ಅವರ ಮಾತನ್ನು ಕೇಳುತ್ತಿದ್ದ ಅವರು ಕೊನೆಯಲ್ಲಿ ಆ ಯುವಕರನ್ನುದ್ದೇಶಿಸಿ ನೀವು ಯಾವಕಾರಣಕ್ಕೆ ಸ್ವಾಮಿ ವಿವೇಕಾನಂದರು ಹಾಗೂ ಬೇಲೂರು ಮಠವನ್ನು ಹೀಯಾಳಿಸುತ್ತಿದ್ದೀರಿ. ಒಂದು ವೇಳೆ ಬೇಲೂರು ಮಠಕ್ಕೆ ಏನಾದರೂ ಕಾಣಿಕೆ ಕೊಡುವವರಿದ್ದರೆ ಇನ್ನು ಮುಂದೆ ನೀಡಬೇಡಿ. ಅನ್ಯಥಾ ಸ್ವಾಮೀಜಿಯವರನ್ನು ನೀವು ನಿಂದಿಸುವುದು ಸರಿಯಲ್ಲ. ನಿಮ್ಮ ನಿಂದೆಯಿಂದ ಅವರಿಗೆ ದೈಹಿಕವಾಗಿ ಏನೂ ತೊಂದರೆಯಾಗುವುದಿಲ್ಲ ಎಂದು ಹೇಳಿದಾಗ ತಾವುಗಳು ಬೇಲೂರು ಮಠಕ್ಕೆ ಯಾವ ಕಾಣಿಕೆಯನ್ನೂ ನೀಡುತ್ತಿಲ್ಲ ಎಂದಾಗ ಹಾಗಾದರೆ ನಿಮಗೆ ಗೊತ್ತಿರುವುದು ಕೇವಲ ಆಂಗ್ಲರ ಗುಣಗಾನ ಮಾಡುವುದು ಮತ್ತು ಅವರ ಕೈ ಕೆಳಗೆ ಗುಲಾಮರಂತೆ ಬದುಕುವುದು. ಮುಂದೊಮ್ಮೆ ಅವರಿಂದ ಒದೆಸಿಕೊಂಡು ಬೀದಿ ಪಾಲಾಗುವುದು. ಈ ಘಟನೆ ನಡೆದ ಹಲವಾರು ತಿಂಗಳುಗಳ ನಂತರ ಓರ್ವ ಯುವಕ ಬೇಲೂರು ಮಠಕ್ಕೆ ಒಂದು ಸುಭೋಧಾನಂದರ ಕ್ಷಮೆ ಕೇಳಿ ಮನ್ನಿಸಬೇಕೆಂದು ಕೇಳಿಕೊಂಡ. ಜೊತೆಯಲ್ಲಿ ತಾವು ಹೇಳಿದಂತೆ ಆಂಗ್ಲರು ತಮ್ಮೆಲ್ಲರನ್ನು ಬೀದಿ ಪಾಲಾಗಿಸಿದರು. ಪ್ರಾಯಶಃ ಸ್ವಾಮಿ ವಿವೇಕಾನಂದರನ್ನು ನಿಂದಿಸಿದ ಫಲ ಈ ರೂಪದಲ್ಲಿ ತಮಗೆ ದೊರಕಿತು ಎಂದು ಹೇಳುತ್ತಾ ಪಾದಕ್ಕೆ ಎರಗಿದ.

# ಓಡದೇ ಎದುರಿಸಿ

ಸ್ವಾಮಿ ವಿವೇಕಾನಂದರ ಜೀವನದಲ್ಲಿ ನಡೆದ ಘಟನೆಯೊಂದು ಸ್ವಯಂ ಅವರಿಗೇ ದಾರಿ ದೀಪವಾದುದಲ್ಲದೆ ವಿಶ್ವದ ಸರ್ವರಿಗೂ ಪಥದರ್ಶಕವಾಯ್ತು. ಒಂದೊಮ್ಮೆ ಅವರು ಕಾಶಿಯಲ್ಲಿ ದುರ್ಗಾಮಾತೆಯ ಮಂದಿರದಲ್ಲಿ ದುರ್ಗಾದೇವಿಯ ದರ್ಶನ ಮಾಡಿ ಹಿಂತಿರುಗುತ್ತಿದ್ದರು. ಪ್ರಾಯಶಃ ಅವರು ಧರಿಸಿದ ಬಟ್ಟೆಯ ಬಣ್ಣದಿಂದ ಆಕರ್ಷಿತಗೊಂಡ ಕೋತಿಗಳ ಗುಂಪೊಂದು ಅವರನ್ನು ಅಟ್ಟಸಿಕೊಂಡು ಬಂತು. ಕಿರುದಾರಿಯಲ್ಲಿ ನಡೆಯುತ್ತಿದ್ದ ಅವರು ಬೇರೆ ದಾರಿ ಕಾಣದೆ ಓಡತೊಡಗಿದರು. ಆದರೂ ಕೋತಿಗಳ ಗುಂಪು ವೇಗದಿಂದ ಹತ್ತಿರ ಬರತೊಡಗಿತು. ಆಗೊಬ್ಬ ಸನ್ಯಾಸಿ ವಿವೇಕಾನಂದರನ್ನು ಕುರಿತು "ಓಡಬೇಡಿ ನಿಂತು ಎದುರಿಸಿ" ಎಂದು ಕಿರುಚಿಕೊಂಡಾಗ ವೃದ್ಧ ಸನ್ಯಾಸಿಯ ಆದೇಶದಂತೆ ನಿಂತು ತೀವ್ರವಾಗಿ ಕೋತಿಗಳನ್ನು ದಿಟ್ಟಿಸಿದರು. ಅದರೊಡನೆ ಕೋತಿಗಳತ್ತ ಒಂದೊಂದೇ ಹೆಜ್ಜೆಯಿಡತೊಡಗಿದಾಗ ಹೆದರಿದ ಕೋತಿಗಳ ಗುಂಪು ಹಿಂತಿರುಗ ತೊಡಗಿತು. ಆಗ ತಮ್ಮ ನಡೆಯಲ್ಲಿ ವೇಗ ತೋರಿದಾಗ ಕೋತಿಗಳ ಗುಂಪು ಭಯದಿಂದ ಹಿಂತಿರುಗಿ ದಿಕ್ಕಾಪಾಲಾಗಿ ಓಡಿ ಹೋಯಿತು.

ವೃದ್ಧ ಸನ್ಯಾಸಿ ನೀಡಿದ ಧೈರ್ಯ ವಾಕ್ಯವನ್ನು ತಮ್ಮ ಜೀವನ ಪೂರ್ತಿ ಅನುಸರಿಸಿದ ವಿವೇಕಾನಂದರು "ಧೈರ್ಯಂ ಸರ್ವತ್ರ ಸಾಧನಂ" ಎಂಬ ದಿಗ್ದರ್ಶನವನ್ನು ಜಗತ್ತಿನ ಸಮಸ್ತರಿಗೆ ತಮ್ಮ ನಡೆಯ ಮೂಲಕ ತೋರಿಸಿಕೊಟ್ಟರು.

# ಪ್ರಶಸ್ತಿ ಪುರಸ್ಕೃತರು

## ಭಾರತರತ್ನ ಪಂ. ಭೀಮಸೇನ ಜೋಶಿ

ದೇಶದ ಅತ್ಯುಚ್ಚ ನಾಗರಿಕ ಗೌರವವಾಗಿರುವ 'ಭಾರತರತ್ನ' ಪ್ರಶಸ್ತಿಯನ್ನು ಕನ್ನಡಿಗರಾದ ಪಂಡಿತ್ ಭೀಮಸೇನ ಜೋಶಿಯವರು ಪಡೆದುಕೊಂಡಿರುವುದು ಸಮಸ್ತ ಕನ್ನಡಿಗರಿಗೂ ಹೆಮ್ಮೆಯ ಸಂಗತಿ. ಹಿಂದುಸ್ತಾನಿ ಸಂಗೀತದ ದಿಗ್ಗಜರಲ್ಲೊಬ್ಬರಾಗಿರುವ ಜೋಶಿಯವರ ಸಂಗೀತ ಪ್ರತಿಭೆಯ ಕುರಿತು ಎಷ್ಟು ಬಣ್ಣಿಸಿದರೂ ಸಾಲದು. 'ಸಾಗರಂ ಸಾಗರೋಪಮಂ' ಎಂಬಂತೆ ಅವರ ನಾದವೈಭವಕ್ಕೆ ಅವರೇ ಸರಿಸಾಟಿ. ಧಾರವಾಡದಲ್ಲಿ ಹುಟ್ಟಿ ಬೆಳೆದು, ಕುಂದ ಗೋಳದ ಸವಾಯಿ ಗಂಧರ್ವರ ಶಿಷ್ಯರಾಗಿ ಅರಳಿ ದೇಶವಿದೇಶಗಳಲ್ಲಿ ತಮ್ಮ ಗಾನ ಪ್ರತಿಭೆಯಿಂದ ಕೋಟ್ಯಂತರ ಜನರ ಮನ ಸೂರೆಗೊಂಡ ಸ್ವರಸಾಮ್ರಾಟರು ಜೋಶಿ. ಶಾಸ್ತ್ರೀಯ ಸಂಗೀತ ಪ್ರಿಯರು ಮೈಮರೆಯುವಂತೆ ಹಾಡುವ ಅವರು 'ದಾಸವಾಣಿ' 'ಸಂತವಾಣಿ' ಗಳ ಗಾಯನದಿಂದ ಸಾಮಾನ್ಯ ಜನರ ಹೃದಯಗಳನ್ನು ಗೆದ್ದವರು. ಜೋಶಿಯವರಿಗೆ ದೊರೆತ ಪ್ರಶಸ್ತಿ ಯಿಂದ ಪ್ರಶಸ್ತಿಗೇ ಗೌರವ ಹೆಚ್ಚಿದೆ. ಐವತ್ತೂರು ವರ್ಷಗಳ ಹಿಂದೆ ಸರ್.ಎಂ. ವಿಶ್ವೇಶ್ವರಯ್ಯನವರಿಗೆ ಈ ಪ್ರಶಸ್ತಿ ದೊರಕಿತ್ತು. ಅದು ಕನ್ನಡಿಗನೊಬ್ಬನಿಗೆ ದೊರೆತ ಪ್ರಥಮ 'ಭಾರತರತ್ನ' ಪ್ರಶಸ್ತಿ. ಕನ್ನಡಕ್ಕೆ ಎರಡನೆಯ 'ಭಾರತರತ್ನ' ವನ್ನು ತಂದಿರುವ ಈ ನಾದ ತಪಸ್ವಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

## ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ

ಈ ವರ್ಷದ ಪ್ರತಿಷ್ಠಿತ ಪಂಪ ಪ್ರಶಸ್ತಿ ಹಿರಿಯ ವಿದ್ವಾಂಸ. ಸಂಶೋಧಕ, ಲೇಖಕರಾದ ಡಾ. ಟಿ.ವಿ. ವೆಂಕಟಾಚಲ ಶಾಸ್ತ್ರಿ ಅವರಿಗೆ ಸಂದಿದೆ. ಇತ್ತೀಚೆಗೆ ಮುಖ್ಯಮಂತ್ರಿ ಯಡಿಯೂರಪ್ಪನವರು ಪ್ರಶಸ್ತಿ ಯನ್ನು ಪಂಪನ ಹುಟ್ಟೂರಾದ ಬನವಾಸಿಯಲ್ಲಿ ನಡೆದ ವಿಶೇಷ ಸಮಾರಂಭದಲ್ಲಿ ವಿತರಿಸಿದರು. ಡಾ. ಶಾಸ್ತ್ರಿಯವರು ಕಳೆದ 50 ವರ್ಷಕ್ಕೂ ಹೆಚ್ಚು ವರ್ಷಗಳಿಂದ ಸಂಶೋಧನಾ ಕ್ಷೇತ್ರದಲ್ಲಿ ಗಂಭೀರವಾಗಿ ತೊಡಗಿಕೊಂಡಿದ್ದು ಅನೇಕ ಮೌಲಿಕ ಕೃತಿಗಳನ್ನು ರಚಿಸಿದ್ದಾರೆ. ವಿದ್ವತ್ಪ ಪಂಚದಲ್ಲಿ ಗೌರವದ ಸ್ಥಾನವನ್ನು ಗಳಿಸಿದ್ದಾರೆ. ಅವರ' ಉದಾರ ಚರಿತರು ಉದಾತ್ತ ಪ್ರಸಂಗಗಳು' ತುಂಬಾ ಜನ ಪ್ರಿಯಕೃತಿ. ಡಾ. ಶಾಸ್ತ್ರಿ ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

## ಶ್ರೀ ಶ್ರೀನಿವಾಸ ವೈದ್ಯ

ಖ್ಯಾತ ಹಾಸ್ಯಲೇಖಕ, ಕತೆಗಾರ ಶ್ರೀನಿವಾಸ ವೈದ್ಯರ 'ಹಳ್ಳ ಬಂತು ಹಳ್ಳ' ಕಾದಂಬರಿಗೆ ಈ ಸಾಲಿನ ಕೇಂದ್ರ ಸಾಹಿತ್ಯ ಅಕಾಡಮಿ ಪ್ರಶಸ್ತಿ ಬಂದಿದೆ. 'ಅಗ್ನಿಕಾರ್ಯ' ಮುಂತಾದ ಜನಪ್ರಿಯ ಕೃತಿಗಳಿಂದ ಪ್ರಸಿದ್ಧರಾದ ವೈದ್ಯರ ಪ್ರಥಮ ಕಾದಂಬರಿಗೇ ಈ ಪ್ರಶಸ್ತಿ ದೊರೆತಿರುವುದು ವಿಶೇಷವಾಗಿದೆ. ಧಾರವಾಡದ ಜವಾರಿ ಕನ್ನಡದಲ್ಲಿ ಮೂರು ತಲೆಮಾರುಗಳ ಜೀವನವನ್ನು ಚಿತ್ರಿಸುವ ಈ ಕಾದಂಬರಿ ಈಗಾಗಲೇ ಎರಡು ಮುದ್ರಣಗಳನ್ನು ಕಂಡಿದೆ. ಪ್ರಶಸ್ತಿ ವಿಜೇತ ವೈದ್ಯರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

## ಶ್ರೀ ಎಸ್.ಆರ್. ವಿಜಯಶಂಕರ

ಕನ್ನಡದ ಹೊಸತಲೆಮಾರಿನ ಸಮರ್ಥ ವಿಮರ್ಶಕ ಎಸ್. ಆರ್. ವಿಜಯ ಶಂಕರ್ ಅವರಿಗೆ ಉಡುಪಿಯ ಗೋವಿಂದ ಪೈ ಸಂಶೋಧನ ಕೇಂದ್ರದ ಪ್ರೊ. ವಿ.ಎಂ. ಇನಾಂದಾರ ಪ್ರಶಸ್ತಿ ದೊರೆತಿದೆ. ಕೆಲಕಾಲ ಆಂಗ್ಲ ಸಾಹಿತ್ಯದ ಪ್ರಾಧ್ಯಾಪಕರಾಗಿದ್ದ ಅವರು ಈಚಿನ ವರ್ಷಗಳಲ್ಲಿ ಬಹು ರಾಷ್ಟ್ರೀಯ ಕಂಪನಿಯೊಂದರಲ್ಲಿ ಹಿರಿಯ ಅಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರೂ ತಮ್ಮ ಸಾಹಿತ್ಯಪ್ರೇಮವನ್ನು ಅಧ್ಯಯನ ಶೀಲತೆಯನ್ನು ಉಳಿಸಿಕೊಂಡು 'ಒಳನೋಟ' 'ಒಡನಾಟ' 'ಪ್ರತಿಮಾಲೋಕ' ಮುಂತಾದ ವಿಮರ್ಶಕೃತಿಗಳನ್ನು ಪ್ರಕಟಿಸಿದ್ದಾರೆ. ನಮ್ಮ ಶಿವರಾಮಕಾರಂತ ವೇದಿಕೆಯ ಉಪಾಧ್ಯಕ್ಷರೂ ಆಗಿರುವ ಶ್ರೀ ವಿಜಯಶಂಕರ ಅವರಿಗೆಈ ಪ್ರತಿಷ್ಠಿತ ಪ್ರಶಸ್ತಿ ದೊರೆತಿರುವುದು ನಮ್ಮ ಪಾಲಿಗೆ ಹೆಮ್ಮೆಯ ಹಾಗೂ ಸಂತೋಷದ ಸಂಗತಿಯಾಗಿದೆ. ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು ಮತ್ತು ಶುಭಾಶಯಗಳು.

## ಶ್ರೀಮತಿ ಪ್ರೇಮಾಭಟ್

ಕರ್ನಾಟಕ ರಾಜ್ಯದ ಮಹಿಳಾ ಮತ್ತು ಕಲ್ಯಾಣ ಇಲಾಖೆ ಪ್ರತಿ ವರ್ಷ ನೀಡುತ್ತ ಬಂದಿರುವ ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿಯನ್ನು ಕನ್ನಡದ ಪ್ರಖ್ಯಾತ ಕಥೆ ಮತ್ತು ಕಾದಂಬರಿಗಳ

ಲೇಖಕಿ ಶ್ರೀಮತಿ ಪ್ರೇಮಾಭಟ್‌ರವರು ಪಡೆದಿರುವುದು ಅತ್ಯಂತ ಸಂತೋಷದ ಸಂಗತಿಯಾಗಿದೆ. ಕಲೆ, ಸಾಹಿತ್ಯ ಶಿಕ್ಷಣ ರಂಗಗಳಲ್ಲಿ ವಿಶಿಷ್ಟ ಸಾಧನೆ ಮಾಡಿದವರಿಗೆ ನೀಡಲಾಗುವ ಈ ಪ್ರಶಸ್ತಿ ಹತ್ತು ಸಾವಿರ ರೂಪಾಯಿಗಳ ನಗದನ್ನು ಮತ್ತು ಪ್ರಶಸ್ತಿ ಫಲಕಗಳನ್ನು ಒಳಗೊಂಡಿರುತ್ತದೆ. ಶ್ರೀಮತಿ ಪ್ರೇಮಾಭಟ್‌ರವರು ನಮ್ಮ ಶಿವರಾಮ ಕಾರಂತರ ವೇದಿಕೆಯ ಅಧ್ಯಕ್ಷೆಯಾಗಿ 13 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಅವರು 500ಕ್ಕೂ ಹೆಚ್ಚು ಕತೆಗಳನ್ನೂ, 35 ಕಾದಂಬರಿಗಳನ್ನು, ಕವನಗಳನ್ನು ಬರೆದು ಕನ್ನಡದ ಅತ್ಯಂತ ಜನಪ್ರಿಯ ಸಾಹಿತಿಗಳಲ್ಲಿ ಗಣ್ಯರಾಗಿದ್ದಾರೆ. ಶ್ರೀಮತಿ ಪ್ರೇಮಾಭಟ್‌ರವರಿಗೆ ನಮ್ಮ ವೇದಿಕೆಯ ಪರವಾಗಿ ಹಾರ್ದಿಕ ಅಭಿನಂದನೆಗಳು ಹಾಗೂ ಶುಭಾಶಯಗಳು.



ಸಂಸಾರವು ವಿಷವೃಕ್ಷವಾದರೂ ಅದರಲ್ಲಿ
ಎರಡು ಅಮೃತದಂತಹ ಫಲಗಳಿವೆ.
ಮೊದಲನೆಯದು ಕಾವ್ಯಾಂಮೃತದ ರಸಸ್ವಾದನೆ ಮತ್ತು
ಎರಡನೆಯದು ಸಜ್ಜನರ ಸಂಗ - ಇವೇ ಆ ಅಮೃತ ಫಲಗಳು.

- ಸಂಸ್ಕೃತ ಸುಭಾಷಿತ

## ತರಳುಬಾಳು ಮಹೋತ್ಸವ

ಫೆಬ್ರವರಿ ಒಂದರಿಂದ ಒಂಭತ್ತರವರೆಗೆ ದಾವಣಗೆರೆಯಲ್ಲಿ ಡಾ|| ಶಿವಮೂರ್ತಿ ಶಿವಾಚಾರ್ಯರ ನೇತೃತ್ವದಲ್ಲಿ ನಡೆಯುತ್ತಿರುವ ಭಾವೈಕ್ಯ ಸಮಾವೇಶದ ಉದ್ಘಾಟನಾ ಸಮಾರಂಭವನ್ನು ನೋಡಿ ಬಂದೆನು, ಅದೆಂತಹ ಜನಸ್ತೋಮ ಆದರೂ ಶಿಸ್ತುಬದ್ಧವಾಗಿ ಎಲ್ಲವೂ ನಡೆಯುತ್ತಿತ್ತು. ದಾಸೋಹವಿಲ್ಲದೆಯೂ ಐದು ಲಕ್ಷ ಜನ ರಾತ್ರಿ 11 ಗಂಟೆಯವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳನ್ನೂ ಭಾಷಣಗಳನ್ನು ಕೇಳುತ್ತಾ ಕುಳಿತಿದ್ದುದೇ ಒಂದು ವಿಸ್ಮಯ.

ಫೆಬ್ರವರಿ 4 ರಿಂದ ಚಿತ್ರದುರ್ಗದಲ್ಲಿ ಕನ್ನಡ ಸಾಹಿತ್ಯಪರಿಷತ್ತಿನ 75ನೆಯ ಸಾಹಿತ್ಯ ಸಮ್ಮೇಳನ ನಡೆಯಿತು. ಅಂತೂ ಕನ್ನಡದ ಸಾಂಸ್ಕೃತಿಕ ಪರಂಪರೆಗೆ ಜಾಗತೀಕರಣದ ಈ ದಿನಗಳಲ್ಲಿ ಅಪಾಯ ತಟ್ಟದಂತೆ ನೋಡುವ ಮಹತ್ತರವಾದ ಹೊಣೆ ನಮ್ಮ ಮೇಲಿದೆ.ಈ ದಿಸೆಯಲ್ಲಿ ಶಿವರಾಮ ಕಾರಂತರ ವೇದಿಕೆ ತನ್ನ ಅಳಿಲು ಸೇವೆಯನ್ನು ಅಬಾಧಿತವಾಗಿ ನಡೆಸಿಕೊಂಡು ಬರಲಿ ಎಂದು ಹಾರೈಸುವೆನು.

**ಪಾ. ಚಂದ್ರಶೇಖರ ಚಡಗ**

**ವ್ಯವಸ್ಥಾಪಕ ಸಂಪಾದಕ**

'ಕಾಲಮಾನದ ದೃಷ್ಟಿಯಿಂದ ಈ ಇಪ್ಪತ್ತನೆಯ ಶತಮಾನದ ಈಗಿನ ದಿನಗಳಲ್ಲಿ ಇಂಥ ನಂಬಿಕೆಗಳಿಂದ ಪ್ರೇರಿತವಾಗಿ ಧರ್ಮ ಶ್ರದ್ಧೆಯನ್ನು ಬೆಳೆಸಿಕೊಂಡವರ ಸಂಖ್ಯೆ ಅಥವಾ ಬೆಳೆಯಿಸಿಕೊಂಡಿದ್ದೇವೆ ಎನ್ನುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಅದೇ ಮಾನದಿಂದ ನಮ್ಮ ಸಾಮಾಜಿಕ ಜೀವನವನ್ನು ನೋಡಿದ್ದೇ ಆದರೆ 'ಪರರಿಗೆ ಏನಾದರೂ ಚಿಂತೆಯಿಲ್ಲ, ಸ್ವಂತಕ್ಕೆ ಸುಖ ಸಿಗಲಿ' ಎನ್ನುವ ವರ್ತನೆಯೇ ಹೆಚ್ಚುತ್ತಿದೆ. ಎಂಬುದೇ ಒಂದು ದೊಡ್ಡ ಸಮಸ್ಯೆ. ಹೆಚ್ಚಿನ ಮತಗಳು ಈ ವಿಶ್ವ ಸೃಷ್ಟಿ ಮತ್ತು ಅದರೊಳಗಿನ ಜೀವ ಕೋಟಿಯು ದೇವರೆಂಬ ವ್ಯಕ್ತಿ ಯಿಂದಲೊ, ಶಕ್ತಿಯಿಂದಲೂ ಉಂಟಾಗಿತೆಂದರೂ, ನಾವೆಲ್ಲರೂ ಒಂದೇ ತಾಯಿಯ, ಇಲ್ಲವೇ ಬದುಕಿನ ಮಕ್ಕಳು ಎಂಬ ಭಾವನೆ ಕಾಣುತ್ತಿಲ್ಲ.

**- 'ಕಣ್ಣಿದ್ದೂ ಕಾಣರು' ಕಾದಂಬರಿಯ ಮುನ್ನುಡಿಯಿಂದ**

# ಯಾರು ಏನು ಹೇಳುತ್ತಾರೆ ?

ನೆಲವನ್ನು ವಿದೇಶಗಳಿಗೆ ಮಾರಾಟ ಮಾಡುವ ಗಣಿ ಮಾಲೀಕರು ದೇಶ ದ್ರೋಹಿಗಳು. ಹಣದಿಂದಲೇ ಏನು ಬೇಕಾದರೂ ಮಾಡಬಹುದು ಎನ್ನುವವರು ಜನದ್ರೋಹಿಗಳು.

**-ಯು. ಆರ್. ಅನಂತಮೂರ್ತಿ**

ಹಿಂದೂ ಧರ್ಮ ಹೋದರೆಷ್ಟು, ಬಿಟ್ಟರೆಷ್ಟು? ಅದಕ್ಕಿಂತ ಮುಖ್ಯ ಪ್ರಶ್ನೆ. ಹಿಂದೂ ಧರ್ಮ ನೀಡಿರುವ ಬೌದ್ಧಿಕ ಸ್ವಾತಂತ್ರ್ಯವೇ ನಾಶವಾದರೆ ಗತಿಯೇನು? ನಮ್ಮ ವೈವಿಧ್ಯಮಯವೂ ಶ್ರೀಮಂತವೂ ಆದ ಕಲೆ, ಸಂಗೀತ, ಶಿಲ್ಪ, ಚಿತ್ರ, ಸಾಹಿತ್ಯ ಸಂಸ್ಕೃತಿ ಮುಂತಾದವು ನಾವೆಲ್ಲರೂ ಸೆಮಿಟಿಕ್ ಧರ್ಮಗಳಿಗೆ ಮತಾಂತರಗೊಂಡರೆ ಉಳಿಯುತ್ತವೆಯೇ ?

**ಎಸ್. ಎಲ್. ಭೈರಪ್ಪ**

ನಮ್ಮ ಸಾಹಿತ್ಯವಿಮರ್ಶೆ ಇತ್ತೀಚೆಗೆ ತೀರ ಅಕಾಡೆಮಿಕ್ ಆಗಿ, ಪರಭಾಷಾಜಡವಾಗಿ, ಅಮೂರ್ತ ವೈಚಾರಿಕತೆಯಾಗಿ ಶಾಬ್ದಿಕ ಗೊಂದಲವಾಗಿ, ನಾರಸವಾಗಿ, ಎಷ್ಟೋ ಸಲ ಅರ್ಥವೇ ಆಗದಂಥ ವಿಚಿತ್ರ ಸ್ಥಿತಿ ತಲುಪಿದೆ.

**ಗಿರಡ್ಡಿ ಗೋವಿಂದರಾಜ**

ಯೌವನ, ಧನ ಸಂಪತ್ತು, ಅಧಿಕಾರ, ಅವಿವೇಕ ಇವುಗಳಲ್ಲಿ ಯಾವುದಾದರೂ ಒಂದೇ ಇದ್ದರೂ ಅನರ್ಥ ಸಂಭವಿಸಬಹುದು. ಈ ನಾಲ್ಕು ಒಂದಾದರೆ ಕೇಳಬೇಕೆ ?

**ಹಿತೋಪದೇಶ**

ಈಗಿನ ಕಾಲದ ಆರ್ಥಿಕ ಸ್ಥಿತಿಗತಿಗಳಿಂದಲೂ, ವ್ಯಕ್ತಿ ಸ್ವಾತಂತ್ರ್ಯಕ್ಕೆ ಅತಿಯಾದ ಪ್ರಾಶಸ್ತ್ಯ ಕೊಡುತ್ತಾ ಬಂದಿರುವುದರಿಂದಲೂ ಸಂಸಾರದಲ್ಲಿ ವಿಶ್ವಾಸ, ಒಗ್ಗಟ್ಟು, ವಿಧೇಯತೆ ಮುಂತಾದ ಸ್ನೇಹಗುಣಗಳು ಕಡಿಮೆಯಾಗುತ್ತಿವೆ. ಸ್ನೇಹವಿಲ್ಲದ ಸಂಸಾರ ಎಂಥ ಸಂಸಾರ ? ಅದು ಮರಳುಗಾಡು ಇಲ್ಲದಿದ್ದರೆ ಕುರುಕ್ಷೇತ್ರ.

**ಎ.ಆರ್. ಕೃಷ್ಣಶಾಸ್ತ್ರಿ**

# ನಮ್ಮ ಇತ್ತೀಚಿನ ಕಾರ್ಯಕ್ರಮಗಳು

ದಿನಾಂಕ 11-1-2009 ರಂದು ನಾವು ತರಳಬಾಳು ಕೇಂದ್ರ, ಥೋರೋ ಫೌಂಡೇಶನ್ ಮತ್ತು ಲಿಟ್ಲ್‌ವರ್ಲ್ಡ್ ಸಂಸ್ಥೆಗಳ ಸಹಯೋಗದೊಂದಿಗೆ 'ಮಾಹಿತಿ ಹಕ್ಕು ಮತ್ತು ಆಡಳಿತ ಸುಧಾರಣೆ' ಎನ್ನುವ ವಿಷಯದ ಕುರಿತು ಶ್ರೀ ವೈ. ಜಿ. ಮುರುಳೀಧರ ಅವರ ಭಾಷಣವೊಂದನ್ನು ಏರ್ಪಡಿಸಿದ್ದೆವು. ಈ ಭಾಷಣವು ನೆರೆದ ಶ್ರೋತೃಗಳಿಂದ ಪ್ರಶಂಸಿಸಲ್ಪಟ್ಟಿತು. ಶಿವರಾಮ ಕಾರಂತರು ಬದುಕಿಗೆ ಹೆಚ್ಚು ಮಹತ್ವವನ್ನು ಕೊಟ್ಟವರು. ಬಳಕೆದಾರರ ಹಕ್ಕಿಗಾಗಿ ಪರಿಸರ ಸಂರಕ್ಷಣೆಗಾಗಿ ಇಳಿ ವಯಸ್ಸಿನಲ್ಲೂ ಸುಪ್ರೀಂ ಕೋರ್ಟ್ ಮೆಟ್ಟಿಲನ್ನು ತುಳಿದವರು. ಅಂತಹವರ ಹೆಸರಿನ ವೇದಿಕೆ ನಾಗರೀಕರಿಗೆ ಉತ್ತಮ ಆಡಳಿತ ದೊರಕಲು ಇಂತಹ ಭಾಷಣವನ್ನು ಏರ್ಪಡಿಸಿದ್ದು ಸಮಯೋಚಿತವಾಗಿದೆ ಎಂದು ಶ್ರೀ ವೈ. ಜಿ. ಮುರಳೀಧರ ಅವರು ಅಭಿಪ್ರಾಯಪಟ್ಟರು. ಆರಂಭದಲ್ಲಿ ವೇದಿಕೆಯ ಕಾರ್ಯದರ್ಶಿ ಪ್ರಾ. ಚಂದ್ರಶೇಖರ ಚಡಗರು ಕಾರಂತರ ಹತ್ತುಮುಖಗಳಲ್ಲಿ ಸಾಹಿತ್ಯ ಒಂದು ಮುಖವಾಗಿದ್ದು ಅವರು ಅದು ಬದುಕಿಗಾಗಿ ಎಂದು ನಂಬಿದವರು ಎಂದು ಹೇಳಿದರು. ಸಭೆಯ ಅಧ್ಯಕ್ಷತೆಯನ್ನು ಲಿಟ್ಲ್‌ವರ್ಲ್ಡ್ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಹೆಚ್. ಜಯಸೂರ್ಯ ವಹಿಸಿದ್ದರು. ಶ್ರೀ ರಮೇಶ ಗೋಟಾ ಧನ್ಯವಾದವನ್ನು ಅರ್ಪಿಸಿದರು.




ದಿನಾಂಕ 11-1-2009 ರಂದು ನಡೆದ ಮಾಹಿತಿ ಹಕ್ಕು ಮತ್ತು ಆಡಳಿತ ಸುಧಾರಣೆ'' ಎಂಬ ವಿಷಯದ ಕುರಿತ ಉಪನ್ಯಾಸ ಕಾರ್ಯಕ್ರಮದ ಒಂದು ಚಿತ್ರ. ಎಡದಿಂದ ಬಲಕ್ಕೆ ಶ್ರೀ ಕೆ. ಶ್ರೀನಿವಾಸನ್, ಶ್ರೀ ಹೆಚ್. ಜಯಸೂರ್ಯ ಹಾಗೂ ಶ್ರೀ ವೈ. ಜಿ. ಮುರಳೀಧರರನ್ನು ನೋಡಬಹುದು.

Published by : **P.C. CHADAGA,** Secretary, Shivarama Karantha Vedike (R)
'Adarsha', # 307, 17th Cross, 2nd Block, R.T. Nagar, Bangalore - 560 032.
Ph : 23336822, Edited by : **B. V. KEDILAYA**
Printed at - **SOUNDHARYA GRAPHICS,**
**Designers, Printers**
**Manufacturers of ID Cards & Polymer Rubber Stamps**
Devegowda Road, R.T. Nagar, B-32.Ph : 080-4169 7137 Mob : 93412 88885